# ಕಥೆಗಳ ಜ್ಞಾನ




<u>ರಚಿತ</u> : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org





# ಕಥೆಗಳ ಜ್ಞಾನ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000 **ಬೆಲೆ. 100/–**

## "ಇಂದೂ ಜ್ಞಾನವೇದಿಕೆ" ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ–ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ತಾಯಿ ತಂದೆ.
27. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## "ಇಂದೂ ಜ್ಞಾನವೇದಿಕೆ" ಪ್ರಕಟಣೆಗಳು

56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಹೇತುವಾದ ಪ್ರಶ್ನೆಗಳು– ಸತ್ಯವಾದ ಉತ್ತರಗಳು
86. ಮೂರು ದೈವಗ್ರಂಥಗಳು–ಮೂರು ಪ್ರಥಮ ವಾಕ್ಯಗಳು



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು-ಪಾದರಸಮು.
05. ಯುಗಮು-ಯೋಗಮು.
06. ನೈಜಂ-ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ-ಸೈತ್ಯಂ.
09. ಶೈವಮು-ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ-ಸೃಷ್ಠಿಕರ್ತ.
12. ಕಾಯ-ಪಂಡು-ಕಾಯ.
13. ಜ್ಞಾನಮು-ವಿಜ್ಞಾನಮು.
14. ವಾರ-ಮಾಸ-ವತ್ಸರ.
15. ಸೇಕೂವಲಿ-ಕೂಲಿಸೇವಾ.
16. ಧರ್ಮಮು-ಅಧರ್ಮಮು.
17. ಏಕ್‌ನಿರಂಜನ್-ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ-ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು - ಆರ್ಯುಲು.
22. ಪ್ರಭುವು - ಪ್ರಭುತ್ವಂ.
23. ಭೂತಂ - ಮಹಾಭೂತಂ.
24. ಪ್ರಭು - ಪ್ರಜ.
25. ಯಾದವ್.
26. ಪುಸ್ತಕಮು-ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ-ವಿಕೃತಿ.
29. ಮಾಟ-ಮಂದು.
30. ಏಕತ-ಏಕಾಗ್ರತ.
31. ಹರಿಕಾಲು-ಹರಿಚೇಯಿ.
32. ಪುಟ್ಟಗೋಸಿ-ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ-ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು-
    ಅಮಾಯಕುಡು.
37. ಮರಣಮು-ಶರೀರಮು.
38. ದ್ವಿತೀಯುಡು-ದ್ವಿತೀಯುಡು.
39. ಎದಮೀದಮುದ್ರ-
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ-
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ-
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು-
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ -
    ಗುರುವು ದೈವಮು.
48. ಕಲಿಯುಗಮು.
49. ಮತಮು-ಪಥಮು.
50. ದಿವ್ಯಖುರಾನ್-ಹದೀಸು.
51. ತಲ್ಲಿ.
52. ಪುಟ್ಟುಟ - ಗಿಟ್ಟುಟ.
53. ಗೋರು - ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು - ಹಿಂದುವು.
61. ಸ್ತ್ರೀ-ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–
    ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
     ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ಗ್ರಂಥಮುಲೊ–ಪ್ರಥಮ ವಾಕ್ಯಮುಲು
117. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

# 'ಇಂದೂ ಜ್ಞಾನವೇದಿಕೆ' ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮಿನಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ) ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38, ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ, ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ, (ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38, ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್, ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ದೆವ್ವಗಳ ಕೋನ

ಅದು ಒಂದು ಭಯಂಕರವಾದ ಅಡವಿ. ಎತ್ತರವಾದ ಮರಗಳು, ದಟ್ಟವಾಗಿ ಹರಡಿಕೊಂಡ ಬಳ್ಳಿಗಳು, ಗೂಬೆಗಳಿಗೆ ನಿಲಯವಾದ ಆಲದ ಮರಗಳು, ಭಯಂಕರ ಸರ್ಪಗಳಿಗೆ ನಿಲಯವಾದ ಪೊದೆಗಳಿಂದ ಕೂಡಿದ್ದು ಯಾವ ಕಡೆಯು ನರಸಂಚಾರವಿಲ್ಲದ ಅಡವಿಯ ಮಧ್ಯ ಭಾಗದಲ್ಲಿ ಪುರಾತನ ದೇವಾಲಯ ಒಂದು ಇತ್ತು. ಅದು ಈಶ್ವರ ದೇವಾಲಯವಾದ್ದರಿಂದ ಅಲ್ಲಿ ಪೂಜಾರಿ ಇಲ್ಲ, ಪೂಜೆಗಳು ನಡೆಯುವುದಿಲ್ಲ. ಆದರೆ ಶಿವರಾತ್ರಿ ದಿನ ಮಾತ್ರ ಅಲ್ಲಿಗೆ ಜನಸೇರಿ ಪೂಜೆಗಳು ಮಾಡುವುದು ಒಂದು ಆಚಾರವಾಗಿತ್ತು. ಆ ಒಂದು ದಿನ ಬಿಟ್ಟರೆ ಉಳಿದ ದಿನಗಳಲ್ಲಿ ಮಾನವ ಸಂಚಾರ ಆ ಅಡವಿಯಲ್ಲಿ ಇರುತ್ತಿರಲಿಲ್ಲ. ವರ್ಷಕ್ಕೆ ಒಂದು ದಿನ ಪೂಜೆ ನಡೆಯುವ ಆ ದೇವಾಲಯಕ್ಕೆ ಆ ಒಂದು ದಿನ ಲಕ್ಷ ಸಂಖ್ಯೆಯಲ್ಲಿ  ಮನುಷ್ಯರು ಬರುತ್ತಾರೆ ಆದ್ದರಿಂದ ಎಲ್ಲರ ಸೌಕರ್ಯಕ್ಕಾಗಿ ದೇವಾಲಯದವರೆಗು  ಅಡವಿಯಲ್ಲಿ ಟಾರು ರಸ್ತೆಯನ್ನು ಸರ್ಕಾರದವರು ನಿರ್ಮಿಸಿದ್ದಾರೆ. ವರ್ಷಕ್ಕೆ ಒಂದು ಬಾರಿ ಆ ದಾರಿಯಲ್ಲಿ ಮನುಷ್ಯರು ಪ್ರಯಾಣಿಸುತ್ತಿದ್ದರು. ಅಡವಿ ಪ್ರಾರಂಭದ ಮೊದಲ ಭಾಗದಿಂದ ಮಧ್ಯದಲ್ಲಿರುವ ದೇವಾಲಯಕ್ಕೆ ಅರವತ್ತು ಮೈಲುಗಳ ದೂರ ಇದೆ. ಅಡವಿಯ ಮೊದಲ ಭಾಗದಲ್ಲಿ ರಸ್ತೆಯಮೇಲೆ ಪೋಲೀಸ್ ಚೆಕ್‌ಪೋಸ್ಟ್ ಸಹ ಇತ್ತು. ಶಿವ ರಾತ್ರಿ ದಿನ ಅಲ್ಲದೆ ಬಿಡುವಿನ ದಿನಗಳಲ್ಲಿ ಆ ರಸ್ತೆಯ ಮೇಲೆ ಯಾರೂ ಪ್ರಯಾಣಿಸದಂತೆ ಪೊಲೀಸ್‌ನವರು ನೋಡಿಕೊಳ್ಳುತ್ತಿದ್ದರು. ಅಡವಿಯಲ್ಲಿ ಕ್ರೂರಮೃಗಗಳು ಸಹಿತ ಇಷ್ಟಾನುಸಾರ ಇರುವುದರಿಂದ ಅವುಗಳ ರಕ್ಷಣೆ ಸಲುವಾಗಿ ಸಹ ಪೊಲೀಸ್‌ರವರಿರುತ್ತಿದ್ದರು. ಶಿವರಾತ್ರಿ ದಿನ ಹೊರತುಪಡಿಸಿ ರೋಡಿನಲ್ಲಿ ಅಡವಿಯೊಳಗೆ ಪೊಲೀಸ್‌ನವರು ಸಹ ಹೋಗುತ್ತಿರಲಿಲ್ಲ. ದಾರಿಯಲ್ಲಿ ಹೋಗುವುದಕ್ಕೂ ಸಹ ಭಯಪಡುವಷ್ಟು ಭಯಂಕರವಾದ ಅಡವಿ ಅದು. ಅಡವಿಯಲ್ಲಿ ದೇವಾಲಯಕ್ಕು ಅಡವಿಯ ಪ್ರಾರಂಭದಲ್ಲಿರುವ ಪೊಲೀಸ್ ಚೆಕ್‌ಪೋಸ್ಟಿಗು ಅರವತ್ತು ಮೈಲುಗಳ ದೂರವೆಂದಿದ್ದೇವಲ್ಲವೆ! ಅದರಲ್ಲಿ ಅರ್ಧ ದೂರಕ್ಕೆ ಅಂದರೆ ಮೂವತ್ತು ಮೈಲುಗಳ ದೂರದಲ್ಲಿ ದಾರಿಯಲ್ಲಿಯೆ ನಾಯಿಗಳ

ಕೋನ ಎಂಬ ಒಂದು ಪ್ರಾಂತವಿದೆ. ಅಲ್ಲಿ ಅಡವಿ ನಾಯಿಗಳು ಹೆಚ್ಚಾಗಿ ಇರುತ್ತವೆ. ನಾಯಿಗಳ ಕೋನ ಪ್ರಾಂತದೊಳಗೆ ಉಳಿದ ಅಡವಿ ಜಂತುಗಳು ಸಹ ಬರುವುದಿಲ್ಲ. ಅಲ್ಲಿಗೆ ಬಂದರೆ ಯಾವಾದರು ಸರಿ ನಾಯಿಗಳ ದಾಳಿಗೆ ಬಲಿಯಾಗಬೇಕಾದ್ದೆ. ಶಿವರಾತ್ರಿ ದಿನಕ್ಕೆ ಮೂರು ದಿನಗಳ ಹಿಂದೆ, ಮೂರು ದಿನಗಳ ನಂತರವರೆಗು ನಾಯಿಗಳು ಅಲ್ಲಿರುವುದಿಲ್ಲ. ಆದ್ದರಿಂದ ನಿರ್ಭಯವಾಗಿ ಆ ಸಮಯದಲ್ಲಿ ಮಾತ್ರ ಪ್ರಯಾಣ ಸಾಗಿಸುತ್ತಿದ್ದರು.

ನಾಯಿಗಳ ಕೋನ ಪ್ರಾಂತಕ್ಕೆ ಅಡವಿಯಲ್ಲಿ ಒಂದು ಪ್ರತ್ಯೇಕತೆ ಇದೆ. ನಾಯಿಗಳ ಕೋನವನ್ನು ದೆವ್ವಗಳ ಕೋನ ಎಂದು ಸಹ ಅನ್ನುತ್ತಿದ್ದರು. ದೆವ್ವಗಳೆ ನಾಯಿಗಳ ರೂಪದಲ್ಲಿ ಇರುವುದರಿಂದ ಅದಕ್ಕೆ ದೆವ್ವಗಳ ಕೋನ ಎಂದು ಸಹ ಹೆಸರು ಬಂದಿದೆಯೆಂದು ಕೆಲವರು ಹೇಳುತ್ತಿದ್ದರು. ಶಿವರಾತ್ರಿ ಸಮಯದಲ್ಲಿ ಏಳು ದಿನಗಳು ನಾಯಿಗಳು ಅಲ್ಲಿ ಇಲ್ಲದಂತೆ ಹೋಗುತ್ತಿವೆಯೆಂದರೆ ಅಲ್ಲಿನ ನಾಯಿಗಳೆಲ್ಲ ಶಿವನ ವರದಿಂದ ಭೈರವ ಎನ್ನುವ ದೆವ್ವಗಳಂತೆ ಬದಲಾವಣೆಯಾಗಿ ಶಿವನ ಬಳಿ ಸೇರಿ ನಮಸ್ಕರಿಸುತ್ತವೆಂದು ಮತ್ತೆ ಕೆಲವರ ವಾದ ಸಹ ಇದೆ. ನಾಯಿಗಳು ಶಿವರಾತ್ರಿ ಕಾಲದಲ್ಲಿ ಏಳು ದಿನಗಳು ದೆವ್ವಗಳಂತೆ ಬದಲಾಗುತ್ತವೆ ಆದ್ದರಿಂದ ನಾಯಿಗಳ ಕೋನವನ್ನು ದೆವ್ವಗಳ ಕೋನ ಅನ್ನುತ್ತಿದ್ದಾರೆಂದು ಕೆಲವರ ವಾದ. ಹೇಗಾದರೇನು ನಾಯಿಗಳ ಕೋನ ಎಂದರು ದೆವ್ವಗಳ ಕೋನ ಎಂದರು ಎರಡೂ ಒಂದೆ. ನಾಯಿಗಳ ಕೋನದ ವಿಷಯ ಆ ದಾರಿಯಲ್ಲಿ ಪ್ರಯಾಣಿಸುವವರೆಲ್ಲರಿಗು ತಿಳಿದಿತ್ತು. ಶಿವರಾತ್ರಿ ಸಮಯದಲ್ಲಿ ಆ ದಾರಿಯಲ್ಲಿ ಪ್ರಯಾಣಿಸುವವರೆಲ್ಲರು ಭೈರವನಿಗೆಂದು ಒಂದು ಕೋಳಿಯನ್ನು ತೆಗೆದುಕೊಂಡು ಹೋಗಿ ನಾಯಿಗಳ ಕೋನದಲ್ಲಿ ಬಿಟ್ಟು ಹೋಗುತ್ತಿದ್ದರು. ನಾಯಿಗಳ ಕೋನದಲ್ಲಿ ರಸ್ತೆಯ ಪಕ್ಕದಲ್ಲೆ ಭೈರವನ ಗುಡಿ ಸಹ ಇದೆ. ಭೈರವನ ಗುಡಿಯ ಹತ್ತಿರ ಕೋಳಿಗಳನ್ನು ಬಿಟ್ಟುಹೋಗುವ ಸಾಂಪ್ರದಾಯ ಪೂರ್ವದಿಂದಲು ಇದೆ. ಮಾನವನ ಸಂಚಾರವಿಲ್ಲದ ಅಡವಿಗೆ ಹೆಸರಿಗೆ ಮಾತ್ರ ಕಾವಲು ಅನ್ನುವಂತೆ ಪೋಲೀಸ್ ಚೆಕ್‌ಪೋಸ್ಟ್ ಇದೆ.

ಒಂದು ದಿನ ಚೆಕ್‌ಪೋಸ್ಟಿನ ಬಳಿ ವಿಚಿತ್ರವಾದ ಸಂಘಟನೆ ನಡೆಯಿತು. ಅದು ಏನೆಂದರೆ ಆ ದಿನ ಅಮಾವಾಸ್ಯೆ ಭಾನುವಾರ. ರಾತ್ರಿ ಹನ್ನೆರಡು ಗಂಟೆಯ ಸಮಯದಲ್ಲಿ ಒಂದು ಕಪ್ಪನೆಯ ಕಾರು ಚೆಕ್‌ಪೋಸ್ಟಿನ ಕಡೆಗೆ ನುಗ್ಗಿ ಬಂದಿದೆ. ಯಾವ ವಾಹನವು ಬಾರದ ಪ್ರಾಂತ್ಯವಾದ್ದರಿಂದ ಪೋಲೀಸರು ಅಜಾಗ್ರತೆಯಿಂದಿದ್ದರು. ಪೋಲೀಸರು ನೋಡುತ್ತಿದ್ದ ಹಾಗೆ ಆ ಕಾರು ಅಡವಿಯೊಳಗೆ ನುಗ್ಗಿತು. ಪೋಲೀಸರಿಗೆ ಏನು ಅರ್ಥವಾಗಲಿಲ್ಲ. ಕಳ್ಳರು ಸಹ ಅಡವಿಯೊಳಗೆ ಹೋಗುವುದಕ್ಕೆ ಭಯಪಡುತ್ತಾರೆ ಅಂತಹದರಲ್ಲಿ ಒಂಟಿಕಾರು ನಡುರಾತ್ರಿಯಲ್ಲಿ ಅಡವಿಯೊಳಗೆ ಏಕೆ ಹೋಗಿದೆ. ಹೋಗಿರುವವರು ಯಾರಾಗಿರಬಹುದೆಂದು ಯೋಚಿಸಿದರು. ರಾತ್ರಿ ಎರಡುವರೆ ಗಂಟೆಗಳ ಸಮಯದಲ್ಲಿ ಅದೇ ಕಾರು ತಿರುಗಿ ಬಂದಿದೆ. ಬರುತ್ತಿರುವ ಕಾರನ್ನು ಗಮನಿಸಿ ಪೋಲೀಸರು ಕಾರನ್ನು ನಿಲ್ಲಿಸಲು ಪ್ರಯತ್ನಿಸಿದರು. ಆದರೆ ಕಾರು ನಿಲ್ಲಲಿಲ್ಲ. ಬರುತ್ತಿದ್ದ ವೇಗದಲ್ಲಿಯೆ ಹೊರಟು ಹೋಯಿತು. ಅದು ಪೋಲೀಸರಿಗೆ ಅರ್ಥವಾಗದ ಸಮಸ್ಯೆಯಾಗಿದೆ. ಆ ವಿಷಯವನ್ನು ಅವರ ಮೇಲಿನ ಅಧಿಕಾರಿಯಾದ ಎಸ್.ಪಿ ಅವರಿಗೂ ಸಹ ತಿಳಿಸಲಿಲ್ಲ. ಆದರೂ ಆ ಕಾರಿನ ವಿಷಯದಲ್ಲಿ ಡಿ.ಎಸ್.ಪಿ ಮಟ್ಟದವರೆಗು ವಿಚಾರ ವಿನಿಮಯ ನಡೆದಿದೆ. ಆದರೂ ಯಾವ ಸುಳಿವು ಸಿಗಲಿಲ್ಲ. ಹೀಗೆ ಒಂದು ತಿಂಗಳ ಕಾಲ ಕಳೆದು ಹೋಯಿತು. ಪುನಃ ಅಮಾವಾಸ್ಯೆ ಬಂದಿತು. ಆ ದಿನವೂ ಸಹ ಭಾನುವಾರ ಅಮಾವಾಸ್ಯೆ ದಿನದಂದು ನಡೆದಂತೆ ಒಂದು ಕಾರು ಬರುವುದು, ಹೋಗುವುದು ನಡೆಯಿತು. ಪೋಲೀಸರಿಗೆ ಆಶ್ಚರ್ಯವಾಯಿತು. ಅಲ್ಲಿ ಒಂದು ಗೇಟನ್ನು ತಯಾರು ಮಾಡಿ ಇಡಬೇಕೆಂದುಕೊಂಡರು. ಕೆಲವು ದಿನಗಳು ಶ್ರಮಪಟ್ಟು ರಸ್ತೆಯ ಮೇಲೆ ಗೇಟನ್ನು ಇಟ್ಟಿದ್ದಾರೆ. ಗೇಟು ತೆಗೆಯದೇ ಯಾವ ವಾಹನವು ಅಡವಿಯೊಳಗೆ ಹೋಗದಂತೆ ಏರ್ಪಾಟು ಮಾಡಿದರು. ಮತ್ತೆ ಅಮಾವಾಸ್ಯೆ ದಿನ ಬಂದಿತು . ಈ ಬಾರಿಯು ಸಹ ರಾತ್ರಿ 11–30 ಗಂಟೆಗಳ ಸಮಯದಲ್ಲಿ ಅದೇ ಕಪ್ಪನೆಯ ಕಾರು ಬಂದಿದೆ. ಪೋಲೀಸರು ಗೇಟ್ ಮುಚ್ಚಿದ್ದಾರೆ. ಕಾರಿನ ಕಥೆಯೇನೊ ತಿಳಿದುಕೊಳ್ಳಬೇಕೆಂದು ಕೊಂಡರು. ನೋಡುತ್ತಿದ್ದಹಾಗೆ ವೇಗವಾಗಿ ಬಂದ ಕಾರು ನಿಲ್ಲಲಿಲ್ಲ. ಬರುವ

ವೇಗ ಜೋರಾಗಿದ್ದುದರಿಂದ ನಿಲ್ಲದಂತೆ ಗೇಟನ್ನು ಗುದ್ದಿ ಹೋಯಿತು. ಗೇಟು ಮುರಿದು ಬಿದ್ದು ಹೋಯಿತು. ನಡೆದ ಕೆಲಸಕ್ಕೆ ಪೊಲೀಸ್‌ನವರು ಆಶ್ಚರ್ಯ ಪಟ್ಟರು. ಆ ಕಾರು ಎಲ್ಲಿಂದ ಬರುತ್ತದೊ, ಎಲ್ಲಿಗೆ ಹೋಗುತ್ತದೊ, ಅದರಲ್ಲಿ ಯಾರಿದ್ದಾರೊ, ಏಕೆ ಗೇಟನ್ನು ಸಹ ಗುದ್ದಿ ಹೋದರೊ ಏನೂ ಅರ್ಥವಾಗಲಿಲ್ಲ.

ಹೋದ ಕಾರು ದರ್ಪದಿಂದ ತಿರುಗಿ ಬಂದಿತು ಪೊಲೀಸ್‌ನವರು ನೋಡುತ್ತಿದ್ದ ಹಾಗೆ ತಿರುಗಿ ಹೋಯಿತು. ಈ ವಿಷಯವನ್ನೆಲ್ಲಾ ಎಸ್.ಪಿ ರವರಿಗೆ ತಿಳಿಸಿದರು. ಎಸ್.ಪಿ ರವರು ಆ ಪ್ರಾಂತಕ್ಕೆ ಬಂದು ಮುರಿದು ಹೋದ ಗೇಟನ್ನು ನೋಡಿ ಏನಾದರು ಕ್ಲೂ ದೊರಕುತ್ತದೇನೊ ಎಂದು ಸ್ವಲ್ಪ ಮುಂದಕ್ಕೆ ನಡೆದು ನೋಡಿದನು ಅಲ್ಲಿ ಕಾರಿನ ನಂಬರ್ ಪ್ಲೇಟ್ ಬಿದ್ದಿರುವುದನ್ನು ಗಮನಿಸಿದನು. ಬಿದ್ದಿರುವ ಪ್ಲೇಟನ್ನು ತೆಗೆದುಕೊಂಡು ನೋಡಿದರು. ಆರ್.ಟಿ.ಒ. ಆಫೀಸ್‌ಗೆ ಪೊಲೀಸರು ಹೋಗಿ ಆ ನಂಬರಿನ ವಾಹನ ಯಾರದೆಂದು ವಿಚಾರಿಸಿಕೊಂಡು ಬಂದರು. ಅಲ್ಲಿಗೆ ಸಮೀಪದಲ್ಲಿರುವ ಪಾಮುಲ ಗೂಡೆಮು ಎಂಬ ಊರಿನದೆಂದು ತಿಳಿಯಿತು. ಚೆಕ್‌ಪೋಸ್ಟಿಗೆ ಕೇವಲ ಐದು ಕಿಲೋಮೀಟರುಗಳ ದೂರದಲ್ಲಿಯೆ ಪಾಮುಲ ಗೂಡೆಮು ಇದೆ. ಪೊಲೀಸರು ಅಲ್ಲಿಗೆ ಹೋಗಿ ಒಂದು ಮನೆಯ ಮುಂದೆ ಪಾರ್ಕ್ ಮಾಡಿರುವ ಕಪ್ಪನೆಯ ಕಾರನ್ನು ನೋಡಿದರು. ಕಾರಿನ ಮುಂದಿನ ಭಾಗದಲ್ಲಿ ನಂಬರ್ ಪ್ಲೇಟ್ ಸಹ ಇಲ್ಲ. ಅದರ ಪ್ಲೇಟ್ ನಮ್ಮ ಹತ್ತಿರವಿದೆಯೆಂದು ನಿರ್ಣಯಿಸಿಕೊಂಡ ಪೊಲೀಸರು ಕಾರಿನ ಯಜಮಾನನನ್ನು ಎಸ್.ಪಿ ಆಫೀಸ್‌ಗೆ ಕರೆದುಕೊಂಡು ಹೋದರು. ಕಾರಿನ ರಿಜಿಸ್ಟರ್ ಬುಕ್ ನೋಡಿ ಕಾರಿನ ಯಜಮಾನ ಆತನೇಯೆಂದು ನಿರ್ಣಯಿಸಿಕೊಂಡ ನಂತರ ಆತನನ್ನು ಈ ರೀತಿ ಪ್ರಶ್ನಿಸಿದರು.

**ಎಸ್.ಪಿ. :** ನಿನ್ನ ಹೆಸರು

ಯಜಮಾನ : ಶೇಷಯ್ಯ. ಪೂರ್ತಿ ಹೆಸರು ಕರಿಮಬ್ಬುಲ ಶೇಷಯ್ಯ ಅನ್ನುತ್ತಾರೆ.

**ಎಸ್.ಪಿ :** ಕ್ರಮವಾಗಿ ಮೂರು ಅಮಾವಾಸ್ಯೆಗಳ ದಿನಗಳಲ್ಲಿ ನಿನ್ನ ಕಾರು ಅಡವಿಯೊಳಗೆ ಹೋಗಿ ಬಂದಿದೆ. ಯಾರು ಹೋಗಿದ್ದರು ಅಡವಿಯೊಳಗೆ?

**ಶೇಷಯ್ಯ :** ಮೂರು ಅಮಾವಾಸ್ಯೆ ದಿನಗಳಲ್ಲಿಯೂ ನಾವು ಯಾರು ಪ್ರಯಾಣಮಾಡಲಿಲ್ಲ. ಎರಡು ಅಮಾವಾಸ್ಯೆ ದಿನಗಳಲ್ಲಿಯೂ ಕಾರು ಎಲ್ಲಿ ಪಾರ್ಕಿಂಗ್ ಮಾಡಿಟ್ಟಿದ್ದೇವೋ ಅಲ್ಲಿಯೇ ಇದೆ. ಆದರೆ ನಿನ್ನೆಯ ಅಮಾವಾಸ್ಯೆ ದಿನದಂದು ಸ್ವಲ್ಪ ಜಾಗ ಬದಲಾಗಿದೆ. ಅಷ್ಟೇ ಅಲ್ಲದೆ ನಾವು ಪಾರ್ಕ್ ಮಾಡಿದಾಗ ಸೈಡಿನ ಕನ್ನಡಿಗಳನ್ನು ಮುಚ್ಚಿರುತ್ತೇವೆ. ಆದರೆ ನಿನ್ನೆ ಸಾರಿ ಕನ್ನಡಿಗಳು ತೆರೆದಿರುವುದನ್ನು ನೋಡಿದೆನು. ರಾತ್ರಿ ಹತ್ತು ಗಂಟೆಗೆ ಬಾಗಿಲು ಹಾಕಿಕೊಂಡು ಒಳಗೆ ಮಲಗುತ್ತೇವೆ. ಮತ್ತೆ ಬೆಳಗಿನವರೆಗು ಹೊರಗೆ ನೋಡುವುದಿಲ್ಲ. ಬೆಳಗ್ಗೆ ಕಾರು ಇದೆ ಅಂದುಕೊಳ್ಳುತ್ತೇವೆ ಹೊರತು ನಮಗೆ ಯಾವ ಅನುಮಾನ ಬರಲಿಲ್ಲ. ಈಗ ನಂಬರ್‌ಪ್ಲೇಟ್ ಹೋಗಿದೆ ಮತ್ತು ಕನ್ನಡಿಗಳು ತೆರೆದಿವೆ. ಆದ್ದರಿಂದ ನನಗೂ ಸಹ ಹೊರಗೆ ಏನೋ ನಡೆದಿದೆಯೆಂದು ಅನುಮಾನ ಬಂದಿದೆ.

**ಎಸ್.ಪಿ :** ಕಾರಿನ ಡ್ರೈವರ್ ಯಾರು?

**ಶೇಷಯ್ಯ :** ಕಳೆದ ಮೂರು ತಿಂಗಳಿಂದ ಡ್ರೈವರ್ ಇಲ್ಲಸಾರ್. ನಾವೇ ನಡೆಸಿಕೊಳ್ಳುತ್ತಿದ್ದೇವೆ.

**ಎಸ್.ಪಿ :** ಮೊದಲು ಯಾರು ಡ್ರೈವರ್ ಆಗಿದ್ದರು?

**ಶೇಷಯ್ಯ :** ಗರುಡಯ್ಯ ಎಂಬುವನು ಡ್ರೈವರ್ ಆಗಿದ್ದನು. ಆತನು ಸತ್ತುಹೋಗಿ ಮೂರು ತಿಂಗಳಿಗು ಜಾಸ್ತಿ ಆಗಿದೆ.

**ಎಸ್.ಪಿ :** ನಡೆದಿರುವುದು ಏನಾಗಿರುತ್ತದೆಂದು ನಿನ್ನ ನಂಬಿಕೆ.

**ಶೇಷಯ್ಯ :** ಪ್ಲೇಟ್ ಬಿದ್ದು ಹೋಗಿದೆ ಆದ್ದರಿಂದ ಕಾರು ಹೋಗಿ ಬಂದಿದೆಯೆನ್ನುವುದು ಸತ್ಯವೇ ಇರುತ್ತದೆ. ಯಾರು ಹೋಗಿದ್ದಾರೆ? ಏಕೆ ಹೋಗಿದ್ದಾರೆ ಎನ್ನುವ ವಿಷಯ ನಿಮ್ಮ ಇನ್ವೆಸ್ಟಿಗೇಷನ್‌ನಲ್ಲಿಯೆ ತಿಳಿಯಬೇಕು. ಕಾರಿನ ಬೀಗದ ಕೈ ನನ್ನ ಹತ್ತಿರವೇ ಇರುವಾಗ ಕಾರಿನ ಡೋರು ಹೇಗೆ ಓಪನ್ ಆಗಿದೆ, ಕಾರು ಹೇಗೆ ಸ್ಟಾರ್ಟ್ ಆಗಿದೆ. ಎಲ್ಲ ಅಯೋಮಯವಾಗಿದೆ ಸಾರ್.

**ಎಸ್.ಪಿ :** ಡೂಪ್ಲಿಕೇಟ್ ಬೀಗಗಳಿವೆಯಾ?

**ಶೇಷಯ್ಯ :** ಇಲ್ಲಸಾರ್ ಇರುವುದು ಒಂದೇ ಬೀಗದ ಕೈ.

**ಎಸ್.ಪಿ :** ನಿನಗೆ ತಿಳಿಯದಂತೆ ನಿನ್ನ ಗಾಡಿ ಅಡವಿಯೊಳಗೆ ಹೋಗಿ ಬಂದಿದೆ ಎಂದರೆ ನಂಬಬೇಕೆನ್ನುತ್ತೀಯಾ?

**ಶೇಷಯ್ಯ :** ಈ ವಿಷಯದಲ್ಲಿ ನನ್ನ ಗಾಡಿಯನ್ನು ಯಾರೋ ಬಳಸಿಕೊಂಡಿರುವಂತೆ ರಿಪೋರ್ಟ್ ಬರೆದು ಕೊಡಬಲ್ಲೆನು.

**ಎಸ್.ಪಿ :** ಸರಿ ನೀನು ಹೊರಟು ಹೋಗು ನಂತರ ಕರೆದಾಗ ಬಂದು ನಮಗೆ ಸಹಕರಿಸು.

**ಶೇಷಯ್ಯ :** ಹಾಗೆ ಆಗಲಿ ಸಾರ್. ನಮಸ್ಕಾರ.

ಎಸ್.ಪಿ ಅವರಿಗೆ ಏನು ಅರ್ಥವಾಗಲಿಲ್ಲ. ಈ ವಿಷಯದಲ್ಲಿ ಯಾರು ಜವಾಬ್ಧಾರರು ಇಲ್ಲ. ಯಾವ ನಷ್ಟವು ಯಾರಿಗು ಆಗಲಿಲ್ಲ. ಯಾರು ರಿಪೋರ್ಟ್ ಕೊಡುವವರಿಲ್ಲ. ಈ ವಿಷಯವನ್ನು ಆಳವಾಗಿ ಯೋಚಿಸಬೇಕೆಂದುಕೊಂಡರು. ಚೆಕ್‌ಪೋಸ್ಟಿನ ಹತ್ತಿರ ಗೇಟನ್ನು ಸಹ ತಯಾರು ಮಾಡಲಿಲ್ಲ. ಆದರೆ ಚೆಕ್‌ಪೋಸ್ಟಿಗೆ ಮುಂದೆ ಒಂದು ಫರ್ಲಾಂಗ್, ಹಿಂದೆ ಒಂದು ಫರ್ಲಾಂಗ್ ದೂರದಲ್ಲಿ ಮತ್ತೆ ಹತ್ತು ಜನ ಪೊಲೀಸರನ್ನು ಈ ವಿಷಯದಲ್ಲಿ ಗಮನಿಸುವುದಕ್ಕೆ ಏರ್ಪಾಟು ಮಾಡಿದ್ದಾರೆ. ಒಟ್ಟು ಮೂರು ಜಾಗಗಳಲ್ಲಿ ಮೂವತ್ತು ಜನ ಪೊಲೀಸರನ್ನು ಇಟ್ಟು ಅವರಿಗೆ ವೀಡಿಯೋ ಕೆಮೆರಾಗಳನ್ನು ಕೊಟ್ಟು ಇಟ್ಟಿದ್ದಾರೆ. ಯಾವುದಾದರು ವಾಹನ ಆ ಪ್ರಾಂತದೊಳಗೆ ಬಂದರೆ ಅದನ್ನು ವೀಡಿಯೋ ತೆಗೆಯಿರೆಂದು ಅದರಿಂದ ಅದರಲ್ಲಿ ಪ್ರಯಾಣಿಸುವವರು, ಆ ಗಾಡಿ ನಂಬರು, ಗಾಡಿಯನ್ನು ನಡೆಸುವ ಡ್ರೈವರ್ ತಿಳಿದುಬರುತ್ತಾರೆಂದು ಎಸ್.ಪಿಯವರು ಹೇಳಿ ಇಟ್ಟಿದ್ದಾರೆ. ಆಗಿನಿಂದ ಪೊಲೀಸರಿಗೆ ವಯರ್‌ಲೆಸ್ ಫೋನ್‌ಗಳನ್ನು ಸಹ ಕೊಟ್ಟು ಯಾವುದಾದರು ವಾಹನ ಬಂದರೆ ಒಬ್ಬರಿಗೊಬ್ಬರು ಫೋನ್ ಮಾಡಿಕೊಳ್ಳುವ ಏರ್ಪಾಟು ಸಹ ಮಾಡಿಟ್ಟಿದ್ದಾರೆ. ಪ್ರತಿ ದಿನ ಪೊಲೀಸರು ಬಹು ಜಾಗ್ರತೆಯಿಂದ ಕಾವಲು ಕಾಯುತ್ತಿದ್ದರು. ಮತ್ತೆ ಅಮಾವಾಸ್ಯೆ ದಿನ ಬಂದೇ ಬಂದಿತು. ಆ

ದಿನದ ಮೇಲೆಯೆ ಎಲ್ಲರಿಗು ಅನುಮಾನವಿದೆ ಆದ್ದರಿಂದ ಎಲ್ಲರು ಜಾಗ್ರತೆಯಿಂದಿದ್ದರು. ಆದರೆ ಈ ಬಾರಿ ಕಾರು ಬರಲಿಲ್ಲ. ನೇರವಾಗಿ ಬಸ್ಸೇ ಬಂದಿತು. ಬಸ್ಸಿನೊಳಗೆ ಲೈಟುಗಳೆಲ್ಲ ಒತ್ತಿಕೊಂಡಿವೆ ಆದರೆ ಬಸ್ಸಿನಲ್ಲಿ ಯಾರೂ ಇಲ್ಲ. ಪ್ರಯಾಣಿಕರೇ ಅಲ್ಲ ಡ್ರೈವರ್ ಸಹ ಇಲ್ಲ. ಖಾಲಿ ಬಸ್ಸು ರಾತ್ರಿ ಹೊತ್ತು ಲೈಟ್‌ಗಳನ್ನೆಲ್ಲ ಹಾಕಿಕೊಂಡು ಹೋಗುವುದು ಅದರಲ್ಲಿ ಯಾರು ಇಲ್ಲದಂತೆ ಹೋಗುವುದು ಎಲ್ಲವೂ ವೀಡಿಯೋ ಟೇಪುಗಳಲ್ಲಿ ಪೋಲೀಸರು ಚಿತ್ರೀಕರಿಸಿದ್ದಾರೆ. ಕಾರಿನ ವಿಷಯ ತಿಳಿಯದೇ ಹೋದರು ಈ ಸಲ ಬಸ್ಸಿನ ವಿಷಯ ಚೆನ್ನಾಗಿ ತಿಳಿದು ಹೋಯಿತು. ಏನು ತಿಳಿದರು ಇದೆಲ್ಲಾ ಏಕೆ ನಡೆಯುತ್ತಿದೆಯೆನ್ನುವ ವಿವರ ಮಾತ್ರ ಯಾರಿಗೂ ತಿಳಿಯಲಿಲ್ಲ. ಈ ವಿಷಯದಲ್ಲಿ ಪೋಲೀಸರು ಜುಟ್ಟು ಕಿತ್ತುಕೊಂಡರೂ ಅರ್ಥವಾಗಲಿಲ್ಲ. ಈ ಬಾರಿ ಬಸ್ಸಿನ ನಂಬರು ಸಹ ತಿಳಿಯಿತು. ಆ ವಿಷಯವನ್ನೆಲ್ಲಾ ಎಸ್.ಪಿ ಯವರಿಗೆ ತಕ್ಷಣವೆ ವಯರ್‌ಲೆಸ್‌ಫೋನ್‌ನಲ್ಲಿ ತಿಳಿಸಿದರು. ಬಸ್ಸು ತಿರುಗಿ ಬರುವುದರೊಳಗೆ ರಸ್ತೆಯ ಮೇಲೆ ದೊಡ್ಡ ಕಲ್ಲುಗಳಿಂದ ಗೋಡೆ ಕಟ್ಟಲು ಎಸ್.ಪಿ ಆದೇಶಿಸಿದರು. ಪೋಲೀಸರು ಹಾಗೆ ಒಂದು ಗಂಟೆಯೊಳಗೆ ರೋಡಿಗೆ ಅಡ್ಡವಾಗಿ ಮೂರು ಅಡಿಗಳ ಎತ್ತರವಿರುವ ಕಲ್ಲುಗಳನ್ನು ಜೋಡಿಸಿ ಇಟ್ಟಿದ್ದಾರೆ. ಈಗ ದಾರಿ ಇಲ್ಲ, ಬರುವ ಬಸ್ಸು ನಿಂತುಕೊಳ್ಳುವುದಾದರೆ ನಿಂತುಕೊಳ್ಳಬೇಕು, ಇಲ್ಲವಾದರೆ ಗೋಡೆಯನ್ನು ಗುದ್ದಿ ಆಕ್ಸಿಡೆಂಟ್ ಆದರೂ ಆಗಬೇಕೆಂದುಕೊಂಡರು. ಸರಿಯಾಗಿ 12 ಗಂಟೆಗೆ ಹೋದ ಬಸ್ಸು ತಿರುಗಿ ಬರುತ್ತದೆಂದು ಲೈಟುಗಳ ಬೆಳಕಿಗಾಗಿ ಎದುರು ನೋಡುತ್ತಿದ್ದಾರೆ. 2, 3, 4 ಕೊನೆಗೆ ಐದು ಗಂಟೆಗಳಾದರು ಬಸ್ಸು ತಿರುಗಿ ಬರಲಿಲ್ಲ. ಹಿಂದಿನ ಬಾರಿ ಇದೇ ಅಮಾವಾಸ್ಯೆ ದಿನಗಳಲ್ಲಿ ಹೋಗಿದ್ದ ಕಾರು ತಿರುಗಿ ಬಂದರೆ ಬಸ್ಸು ಮಾತ್ರ ಬೆಳಗಾದರು ಬರಲಿಲ್ಲ. ಬಸ್ಸು ಬಾರದ ವಿಷಯವನ್ನು ಎಸ್.ಪಿ ಯವರಿಗೆ ತಿಳಿಸಿದರು. ಎಸ್.ಪಿ ಗು ಸಹ ಏನೂ ಅರ್ಥವಾಗಲಿಲ್ಲ. ಆದರೆ ಬಸ್ಸಿನ ನಂಬರು ಇದೆಯಲ್ಲವೆಂದು ಅದು ಯಾರದೊ ವಿಚಾರಿಸಿರೆಂದು ತಿಳಿಸಿದನು. ಆ ವಿಷಯವಾಗಿ ಪೊಲೀಸರು ಹೋಗಿ ಬಸ್ಸಿನ ಓನರ್‌ನನ್ನು ವಿಚಾರಿಸಿದರು. ಬಸ್ಸಿನ ಓನರ್ ತನ್ನ ಬಸ್ಸು ರಾತ್ರಿ

ಕಳ್ಳತನವಾಗಿದೆಯೆಂದು, ಅದೇ ವಿಷಯವನ್ನು ಸಂಬಂಧಿಸಿದ ಪೋಲೀಸ್ ಠಾಣೆಯಲ್ಲಿ ರಿಪೋರ್ಟ್ ಕೊಟ್ಟಿದ್ದೇವೆಂದು ತಿಳಿಸಿದನು. ಅಲ್ಲಿಗೆ ಪೋಲೀಸರಿಗೆ ಯಾವ ಕ್ಲೂ ಸಿಗದಂತೆ ಹೋಗಿದೆ. ರಾತ್ರಿ 11–30 ಗಂಟೆಗಳಿಂದ ತನ್ನ ಬಸ್ಸು ಕಾಣಿಸಲಿಲ್ಲವೆಂದು ಬಸ್ಸಿನ ಓನರ್ ದೂರು ಸಲ್ಲಿಸಿದರು. ಅದರಿಂದ ಬಸ್ಸಿನ ಸುಳಿವು ತಿಳಿದುಕೊಳ್ಳುವ ಜವಾಬ್ದಾರಿ ಪೋಲೀಸ್‌ನವರ ಮೇಲೆ ಬಿದ್ದಿದೆ. ಪೋಲೀಸ್ ಡಿಪಾರ್ಟ್‌ಮೆಂಟಿಗೆ ಇದು ಒಂದು ಸವಾಲಾಗಿ ಉಳಿದಿದೆ. ರೋಡಿನ ಮೇಲೆ ಅಡ್ಡಗೋಡೆಯನ್ನು ಪೋಲೀಸ್‌ನವರು ಹಾಗೆ ಇರಿಸಿ ಯೋಚಿಸ ತೊಡಗಿದರು. ಅಡವಿಯೊಳಗೆ ಹೋಗಿ ನೋಡಲು ಎಸ್.ಪಿರವರು ಆರ್ಡರ್ ಹಾಕಿದನು. ಅದರಿಂದ ಕೆಳ ಮಟ್ಟದ ಪೋಲೀಸರಿಗೆ ಮುಂದೆ ಬಾವಿ ಹಿಂದೆ ಕೆರೆ ಇದ್ದಂತಾಗಿದೆ.

ಕೊನೆಗೆ ಪೋಲೀಸ್‌ನವರು ತಮ್ಮ ಬಂದೋಬಸ್ತಿನಿಂದ ಖೈದಿಗಳನ್ನು ಕರೆದುಕೊಂಡು ಹೋಗುವ ಕ್ಲೋಸ್ಡ್ ವ್ಯಾನ್‌ನಲ್ಲಿ ಅಡವಿಯೊಳಗೆ ಹೊರಟರು. ಚೆಕ್‌ಪೋಸ್ಟಿನ ಬಳಿ ಗೋಡೆಯನ್ನು ತೆಗೆದುಹಾಕಿ ಅಡವಿಯೊಳಗೆ ಹೋದರು. ಇಪ್ಪತ್ತು ಜನ ಪೋಲೀಸರು ಬಂದೂಕುಗಳನ್ನು ತೆಗೆದುಕೊಂಡು ಹೋದರೂ ಅವರಿಗೆ ಭಯವೇ ಇದೆ. ರಸ್ತೆ ಇರುವುದು ಅಡವಿಯೊಳಗೆ ಈಶ್ವರ ದೇವಾಲಯದವರೆಗೇ ಆದ್ದರಿಂದ ಅಲ್ಲಿಯವರೆಗು ಹೋಗಿ ನೋಡಬೇಕೆಂದು ಕೊಂಡರು. ವ್ಯಾನ್ ನಾಯಿಗಳ ಕೋನ ದಾಟಿತು, ಕೊನೆಗೆ ಈಶ್ವರ ಆಲಯದವರೆಗು ಬಂದಿತು. ಅಲ್ಲಿ ಈಶ್ವರಾಲಯದ ಪಕ್ಕದಲ್ಲಿ ಬಸ್ಸು ನಿಂತಿರುವು ದನ್ನು ಗಮನಿಸಿದರು. ಬಸ್ಸು ಖಾಲಿಯಾಗಿ ಇದೆ. ಅಲ್ಲಿ ಆ ಪರಿಸರ ಪ್ರಾಂತದಲ್ಲಿ ಯಾರೂ ಇಲ್ಲವೆಂದು ನಿರ್ಧಾರಿಸಿಕೊಂಡರು. ಬಸ್ಸನ್ನು ತಮ್ಮ ಜೊತೆಗೆ ತರಬೇಕೆಂದುಕೊಂಡರು. ಬಸ್ಸನ್ನು ಸ್ಟಾರ್ಟ್ ಮಾಡಿದರೆ ಅದು ಸ್ಟಾರ್ಟ್ ಆಗಲಿಲ್ಲ. ಏಕೆ ಸ್ಟಾರ್ಟ್ ಆಗಲಿಲ್ಲವೆಂದು ಗಮನಿಸಿದರೆ ಅದರಲ್ಲಿ ಡೀಜಿಲ್ ಮುಗಿದಿದೆ. ಕೊನೆಗೆ ಮಾಡುವುದೇನು ಇಲ್ಲವೆಂದು ವ್ಯಾನಿಗೆ ಬಸ್ಸನ್ನು ಕಟ್ಟಿ ತರಬೇಕೆಂದು ಕೊಂಡರು. ಹಾಗೆ ಮಾಡಿ ಬಸ್ಸನ್ನು ಎಳೆದರೆ ಬಸ್ಸಿನ ಚಕ್ರಗಳು ತಿರುಗಲಿಲ್ಲ.

ಟೈರುಗಳು ನೆಲಕ್ಕೆ ಅಂಟಿಕೊಳ್ಳುತ್ತಿವೆ ಆದರೆ ತಿರುಗುತ್ತಿಲ್ಲ. ಚಕ್ರಗಳಿಗೆ ಬ್ರೇಕ್ ಹಾಕಿದಂತೆ ಬಸ್ಸು ನಡೆಯುವಂತಿಲ್ಲ. ಬ್ರೇಕ್‌ಗಳೇನಾದರೂ ಹಿಡಿದುಕೊಂಡಿ ವೆಯೇನೋಯೆಂದು ಒಂದು ಟೈರ್‌ಗೆ ಜಾಕಿ ಎತ್ತಿ ತಿರುವಿ ನೋಡಿದರು. ಜಾಕಿ ಎತ್ತಿ ತಿರುವಿದರೆ ಟೈರ್ ಸುಲಭವಾಗಿ ತಿರುಗುತ್ತಿದೆ. ಆದರೆ ಬಸ್ಸು ಮುಂದಕ್ಕೆ ಕದಲುತ್ತಿಲ್ಲ. ಪೊಲೀಸ್‌ರವರಿಗೆ ಏನು ಅರ್ಥವಾಗಲಿಲ್ಲ ಜಾಕಿ ಎತ್ತಿ ನೋಡಿದರೆ ತಿರುಗುವ ಟೈರು ಜಾಕಿ ಇಳಿಸಿದರೆ ತಿರುಗದಂತಿರುವುದು ದೊಡ್ಡ ಆಶ್ಚರ್ಯವಾಗಿ ಕಾಣಿಸಿತು. ಇದೇನೋ ದೆವ್ವಗಳ ಕೆಲಸದಂತೆ ಇದೆಯೆಂದು ಮೊಟ್ಟಮೊದಲು ಅನುಮಾನ ಬಂದಿತು. ಮೊದಲೇ ಯಾರು ಬಾರದ ಪ್ರದೇಶ. ತಾವು ಬರುವುದೇ ತಪ್ಪು. ಬಂದ ನಂತರ ಬಹಳ ಹೊತ್ತು ಅಲ್ಲಿ ಇರಬಾರದೆಂದು ಕೊಂಡರು. ತಕ್ಷಣವೆ ಬಸ್ಸನ್ನು ಬಿಟ್ಟು ವ್ಯಾನಿನಲ್ಲಿ ಹೊರಟು ಬಂದರು. ಬಂದ ನಂತರ ನಡೆದ ವಿಷಯವನ್ನೆಲ್ಲ ಎಸ್.ಪಿ ಯವರಿಗೆ ಹೇಳಿದರು. ಎಸ್.ಪಿ ಯವರಿಗೂ ಸಹ ಆಶ್ಚರ್ಯವೆನಿಸಿತು. ಏನು ಅರ್ಥವಾಗದೆ ಏನು ಮಾಡೋಣವೆಂದು ಪೊಲೀಸ್‌ನವರನ್ನೇ ಕೇಳಿದನು. ಅದಕ್ಕೆ ಡಿ.ಎಸ್.ಪಿ ಯವರು ಹೀಗೆ ಹೇಳಿದರು. "ಇದೇನೋ ನಮಗೆ ಅರ್ಥವಾಗದ ವಿಧದಲ್ಲಿದೆ. ಈ ಕಾಡಿನ ಬಗ್ಗೆ, ದೆವ್ವಗಳ ಬಗ್ಗೆ, ಈಶ್ವರ ದೇವಾಲಯ ಬಗ್ಗೆ ಪೂರ್ತಿಯಾಗಿ ತಿಳಿದವರನ್ನು ಕೇಳಿದರೆ ಸ್ವಲ್ಪವಾದರೂ ವಿಷಯ ಅರ್ಥವಾಗುತ್ತದೆ. ಇಲ್ಲದೆ ಹೋದರೆ ಏನೂ ಅರ್ಥವಾಗುವುದಿಲ್ಲ."

**ಎಸ್.ಪಿ :** ಅಂಥವರು ಯಾರಾದರೂ ಇದ್ದಾರಾ?

**ಡಿ.ಎಸ್.ಪಿ :** ನನಗೂ ಸಹ ತಿಳಿದಿಲ್ಲ. ವಿಚಾರಿಸಿದರೆ ತಿಳಿಯುತ್ತದೆ.

**ಎಸ್.ಪಿ. :** ಹಾಗೆ ವಿಚಾರಿಸಿರಿ. ನಮಗೆ ತಿಳಿಯದ ವಿಷಯ ಹೇಳುವಂತವರು ಇರುತ್ತಾರೆನ್ನುತ್ತೀಯಾ?

**ಡಿ.ಎಸ್.ಪಿ :** ದೇವಾಲಯ ರಹಸ್ಯಗಳು, ದೆವ್ವಗಳ ಕೆಲಸಗಳು, ಆತ್ಮಗಳ ಜ್ಞಾನವನ್ನು ತಿಳಿದವರು ಒಬ್ಬರಿದ್ದಾರೆ. ಅವರು ಬರೆದ ಪುಸ್ತಕಗಳಲ್ಲಿ ಇಂತಹ ಸಂಘಟನೆಗಳು ಕೆಲವನ್ನು ಬರೆದಿದ್ದಾನೆ. ಆದ್ದರಿಂದ ಆತನನ್ನು ವಿಚಾರಿಸಿದರೆ ಸ್ವಲ್ಪ ವಿವರ

ತಿಳಿಯಬಹುದು. ಆತನನ್ನು ಹೊರತು ಈ ವಿಷಯವನ್ನು ಹೇಳುವವರು ಯಾರೂ ಇಲ್ಲವೆಂದುಕೊಳ್ಳುತ್ತೇನೆ. ಆದರೆ ಆತನು ಇಲ್ಲಿಗೆ ಬಹಳ ದೂರದಲ್ಲಿ ಅಂದರೆ 300 ಕಿಲೋಮೀಟರುಗಳ ದೂರದಲ್ಲಿದ್ದಾನೆ. ಮೊದಲು ಅಲ್ಲಿಗೆ ಹೋಗಿ ಬರುತ್ತೇನೆ ಸಾರ್.

**ಎಸ್.ಪಿ :** ಸರೀ ನೀನು ಮೊದಲು ಹೋಗಿ ನಮಗೆ ತಿಳಿಯದ ವಿಷಯವೇನಾದರೂ ಇದೆಯೇನೋ ಪತ್ತೆಮಾಡು.

**ಡಿ.ಎಸ್.ಪಿ :** ಹಾಗೆ ಆಗಲಿ ಸಾರ್ ಹೋಗಿ ಬರುತ್ತೇನೆ.

ಡಿ.ಎಸ್.ಪಿ ಪುಸ್ತಕರಚನಕಾರನಿಗಾಗಿ ಹೋದನು. ಆದರೂ ಆತನು ಸಿಗಲಿಲ್ಲ. ಆತನು ಸಿಗಬೇಕೆಂದರೆ ಒಂದು ತಿಂಗಳಕಾಲ ಬೇಕಾಗುತ್ತದೆಂದು ತಿಳಿಯಿತು. ರಚನಕಾರನ ಹೆಸರು ಗಿರೀಶಾನಂದ. ಗಿರೀಶಾನಂದ ರವರು ಒಂದು ತಿಂಗಳ ಕಾಲ ಕ್ಯಾಂಪ್‌ಗೆ ಹೋಗಿದ್ದಾನೆಂದು ತಿಳಿಯಿತು. ಡಿ.ಎಸ್.ಪಿ ಮಾಡುವುದೇನೂ ಇಲ್ಲದೆ ವಾಪಸ್ ಬಂದನು. ಇಲ್ಲಿ ಎಸ್.ಪಿ ರವರಿಗೆ ಹೊಟ್ಟೆನೋವು ಪ್ರಾರಂಭವಾಗಿದೆ. ಪ್ರತಿ ದಿನ ಒಂದು ಗಂಟೆ ಕಾಲ ಹೊಟ್ಟೆನೋವು ಬರುತ್ತದೆ. ವಿಚಿತ್ರವೇನೆಂದರೆ ಎಸ್.ಪಿ ರವರು ಕಾಕಿ ಡ್ರಸ್‌ನಲ್ಲಿರುವಾಗ ನೋವು ಬರುವುದಿಲ್ಲ. ಆತನು ಸಿವಿಲ್ ಡ್ರಸ್‌ನಲ್ಲಿರುವಾಗಲೇ ನೋವು ಬರುವುದು ನಡೆಯುತ್ತಿದೆ. ಡಾಕ್ಟರುಗಳಿಗೆ ತೋರಿಸಿದರು ಕಡಿಮೆ ಆಗುತ್ತಿಲ್ಲ. ಯಾವ ಕಾರಣದಿಂದ ನೋವು ಬರುವುದು ಯಾರಿಗೂ ತಿಳಿಯದೆ ಹೋಗಿದೆ. ಎಸ್.ಪಿ ಯವರಿಗೆ ದೆವ್ವಗಳ ಮೇಲೆ ನಂಬಿಕೆ ಕಡಿಮೆ. ದೆವ್ವಗಳಿವೆಯೆಂದರೆ ನಂಬುವವನಲ್ಲ. ಕೊನೆಗೆ ಅಲೋಪತಿ ಔಷಧಗಳನ್ನು ಬಿಟ್ಟು ಆಯುರ್ವೇದಿಕ್ ಔಷಧಗಳನ್ನು ಬಳಸಿದರೂ ಕಡಿಮೆಯಾಗಲಿಲ್ಲ. ಹದಿನೈದು ದಿನಗಳಿಂದ ಬಾಧೆ ಬರುತ್ತಲೇ ಇದೆ. ಇದು ಎಸ್.ಪಿಯವರ ಪರಿಸ್ಥಿತಿ. ಇನ್ನೂ ಪೊಲೀಸ್ ಚೆಕ್‌ಪೋಸ್ಟಿನ ಹತ್ತಿರ ಪರಿಸ್ಥಿತಿ ಸಹ ಹಾಗೆಯೇ ತಯಾರಾಗಿದೆ. ಅವರು ಡ್ಯೂಟಿ ಮಾಡುವುದಕ್ಕೇ ಭಯಪಡುತ್ತಿದ್ದಾರೆ. ಪ್ರತೀ ದಿನ ಚೆಕ್‌ಪೋಸ್ಟಿನಲ್ಲಿ ಯಾರೋ ಅಡವಿಯೊಳಗೆ ಹೋದಂತೆ ಕಾಣಿಸುತ್ತಲೇ ಇದೆ. ನೋಡುತ್ತಿದ್ದಹಾಗೆ ಒಬ್ಬ ಮನುಷ್ಯ ಪೋಸ್ಟು

ದಾಟಿ ಹೋಗುವುದು ನಡೆಯುತ್ತಲೇ ಇದೆ. ಕಳೆದ ಹದಿನೈದು ದಿನಗಳಿಂದ ಹಾಗೆಯೇ ನಡೆಯುತ್ತಿದೆ. ಎಸ್.ಪಿ ಯವರ ಹೊಟ್ಟೆನೋವು ಬರುವುದು ನಿಲ್ಲುವಂತಿಲ್ಲ. ಹಾಗೆ ಕಾಡಿನೊಳಗೆ ಮನುಷ್ಯ ಹೋಗದಂತೆ ಇರುವಂತಿಲ್ಲ. ಎರಡು ವಿಚಿತ್ರವಾಗಿಯೇ ಇವೆ. ಡಿ.ಎಸ್.ಪಿ ಯವರಿಗೆ ಏನೂ ಅರ್ಥವಾಗಲಿಲ್ಲ. ಯಾರಿಗಾದರೂ ಕೇಳಬೇಕೆಂದರೆ ಹೇಳಿಕೊಳ್ಳುವುದಕ್ಕೆ ನಾಚಿಕೆಯಾಗುತ್ತದೆ. ಈ ವಿಧವಾಗಿ ತಿಂಗಳ ಕಾಲ ಕಳೆದಿದೆ. ಎಸ್.ಪಿ ಯವರಿಗೆ ಹೊಟ್ಟೆನೋವು ಮತ್ತೆ ಸ್ವಲ್ಪ ಹೆಚ್ಚಾಗಿದೆ. ಎಲ್ಲಾ ಪರೀಕ್ಷೆಗಳು ಮಾಡಿಸಿದ್ದಾರೆ. ಲೋಪವಿಲ್ಲವೆಂದು ತಿಳಿಯಿತು.

ಡಿ.ಎಸ್.ಪಿ ಯವರು ಗಿರೀಶಾನಂದರವರಿಗಾಗಿ ಹೋಗಿದ್ದಾನೆ ಗಿರೀಶಾನಂದ ಸ್ವಾಮಿಯವರು ದೊರಕಿದರು. ಡಿ.ಎಸ್.ಪಿ ಯವರು ಏನು ಮುಚ್ಚಿಡದೆ ಮೊದಲಿನಿಂದ ನಡೆದ ತತಂಗವನ್ನೆಲ್ಲಾ ಹೇಳಿದನು. ಹಾಗೆಯೇ ಎಸ್.ಪಿ ಯವರ ಹೊಟ್ಟೆನೋವನ್ನು ಕುರಿತು, ಚೆಕ್ ಪೋಸ್ಟಿನಲ್ಲಿ ನಡೆಯುವ ಸಂಘಟನೆಯನ್ನು ಕುರಿತು ಹೇಳಿದನು. ಗಿರೀಶಾನಂದ ಸ್ವಾಮಿಯವರು ಎಲ್ಲವನ್ನು ಸಾವಧಾನವಾಗಿ ಕೇಳಿದನು. ನಂತರ ಆತನು ಹೀಗೆ ಮಾತನಾಡಿದನು.

ಗಿರೀಶಾನಂದ : ನೀವು ಹೇಳುತ್ತಿರುವ ಕಾಡಿಗೆ ಸ್ವಲ್ಪ ಪ್ರತ್ಯೇಕತೆ ಇದೆ. ಅದರಲ್ಲಿ ಈಶ್ವರ ಗುಡಿ ಇರುವುದು, ದಾರಿ ಮಧ್ಯೆದಲ್ಲಿ ನಾಯಿಗಳ ಕೋನದಲ್ಲಿ ಭೈರವನ ಗುಡಿ ಇರುವುದು ಎಲ್ಲವೂ ಪ್ರತ್ಯೇಕತೆಯೆ. ನೀವು ಅಡವಿಯೊಳಗೆ ಹೋಗಿರಬಾರದು.

**ಡಿ.ಎಸ್.ಪಿ :** ಡ್ಯೂಟಿ ಅಲ್ಲವೆ ಸ್ವಾಮಿ! ಬಸ್ಸು ಹೋಗಿರುವ ದೂರನ್ನು ಕುರಿತು ಹೋಗಬೇಕಾಯಿತು. ಅದೂ ಎಸ್.ಪಿ ಯವರೆ ಸ್ವತಃ ಹೋಗಲು ಹೇಳಿದ್ದಾರೆ.

**ಗಿರೀಶಾನಂದ :** ಆದ್ದರಿಂದಲೆ ಹೋಗಿರುವ ನಿಮಗು, ಹೋಗೆಂದಿರುವ ನಿಮ್ಮ ಎಸ್.ಪಿಯವರಿಗು ಊಹಿಸಲಾಗದ ಕಷ್ಟಗಳು ಪ್ರಾರಂಭವಾಗಿವೆ.

**ಡಿ.ಎಸ್.ಪಿ :** ಇದಕ್ಕೆ ಪರಿಷ್ಕಾರ ನೀವೇ ಹೇಳಬೇಕು. ಅಸಲು ನಾವು ಮಾಡಿದ ತಪ್ಪು ಏನು?

**ಗಿರೀಶಾನಂದ :** ಅಡವಿಯೊಳಗೆ ಹೋಗುವಾಗ ಒಂದು ನಿಯಮವಿದೆ. ಅದನ್ನು ಮೊದಲು ನೀವು ಪಾಲಿಸಲಿಲ್ಲ. ಒಳಗೆ ಹೋಗುವವರು ನಾಯಿಗಳ ಕೋನ ಹತ್ತಿರ ಕೋಳಿಗಳನ್ನು ಬಿಡದಂತೆ, ಅಲ್ಲಿ ನಮಸ್ಕರಿಸದಂತೆ ಹೋಗುವುದು ದೊಡ್ಡ ತಪ್ಪು. ಕಾಡಿನಲ್ಲಿ ಶಿವಾಲಯದವರೆಗು ಹೋಗಿರುವವರು ಆಲಯದೊಳಗೆ ಹೋಗಿ ಶಿವನಿಗೆ ಪೂಜೆ ಮಾಡದಂತೆ ಬರುವುದು ಮತ್ತೆ ದೊಡ್ಡತಪ್ಪು. ಹೀಗೆ ಮಾಡಿರುವುದರಿಂದ ನಿಮ್ಮ ಕೆಲಸಗಳನ್ನು ಇಷ್ಟಪಡದವರು ನಿಮಗೆ ಎಲ್ಲಾ ಅಡಚಣೆಗಳನ್ನು ಕಲ್ಪಿಸಿದ್ದಾರೆ. ಬಸ್ಸನ್ನು ಎಳೆದರು ಬಾರದಂತೆ ಮಾಡಿದ್ದಾರೆ. ಆಗಲಾದರೂ ನಿಮ್ಮದು ತಪ್ಪೆಂದು ಗ್ರಹಿಸಿ ಶಿವನಿಗೆ ಪೂಜೆ ಮಾಡಿದ್ದರೆ ಬಸ್ಸು ಸುಲಭವಾಗಿ ಬರುತ್ತಿತ್ತು.

**ಡಿ.ಎಸ್.ಪಿ :** ಒಂದು ವಿಧದಲ್ಲಿ ನಾವು ಮಾಡಿರುವುದು ತಪ್ಪೆ. ಬಸ್ಸು ಕದಲದಂತಿರುವುದಕ್ಕೆ ಕಾರಣವೇನು? ಯಾರು ಆ ವಿಧವಾಗಿ ಮಾಡಿರುತ್ತಾರೆ?

**ಗಿರೀಶಾನಂದ :** ಎಲ್ಲಾ ವಿವರವಾಗಿ ಹೇಳುವೆನು. ಮೊದಲು ನಿನಗೆ ಅರ್ಥವಾಗುವುದಕ್ಕೆ ಕೆಲವು ವಿಷಯಗಳು ತಿಳಿಯಬೇಕು. ನೀವು ಡ್ಯೂಟಿಯೇ ಮುಖ್ಯವೆಂದುಕೊಂಡಿದ್ದೀರ. ಆದ್ದರಿಂದ ನಮಗೆ ಕಾಣಿಸದಂತೆ ನಮಗಿಂತ ಶಕ್ತಿವಂತರು ಎಷ್ಟೋ ಇದ್ದಾರೆನ್ನುವ ಮಾತನ್ನು ಮರೆತುಹೋಗಿದ್ದೀರ. ನೀವು ಮಾಡುತ್ತಿರುವ ಕೆಲಸವನ್ನು ಇಷ್ಟಪಡದೆ ಕಾಣಿಸದವರು ಮಾಡಿದ ಕೆಲಸವೇ ಬಸ್ಸು ಕದಲದೆ ಹೋಗಿರುವುದು. ನೀವು ಅಲ್ಲಿಗೆ ಹೋಗಿ ಪೂಜೆ ಮಾಡದಂತೆ ನಿಮ್ಮ ಕೆಲಸದಲ್ಲಿ ನೀವು ಲಗ್ನವಾಗಿರುವುದು, ದೇವರನ್ನು ವಿಸ್ಮರಿಸುವುದು ಅಲ್ಲಿನವರಿಗೆ ಸರಿಹೋಗಲಿಲ್ಲ.

**ಡಿ.ಎಸ್.ಪಿ :** ಅಲ್ಲಿ ಯಾರೂ ಇಲ್ಲ ಸ್ವಾಮಿ!

**ಗಿರೀಶಾನಂದ :** ನಿಮಗೆ ಕಾಣಿಸದವರೆಂದು ನಾನು ಮೊದಲೇ ಹೇಳಿದ್ದೇನೆ. ನಿಮ್ಮನ್ನು ಆದೇಶಿಸಿದ ಎಸ್.ಪಿ ಯವರಿಗು ಸಹ ಅವರಿಂದಲೆ ಹೊಟ್ಟೆನೋವು ಬಂದಿದೆ. ಅದು ಔಷಧಗಳಿಂದ ಹೋಗದು, ಮಂತ್ರಗಳಿಂದ ಹೋಗದು. ಕೇವಲ ಭಕ್ತಿಯಿಂದಲೆ ಹೋಗಬೇಕು.

**ಡಿ.ಎಸ್.ಪಿ :** ಆತನಿಗೆ ಏನು ನಡೆದಿರಬಹುದೆನ್ನುತ್ತೀರಾ?

**ಗಿರೀಶಾನಂದ :** ಅಡವಿಯಲ್ಲಿ ಯಾರಾದರೇ ಬಸ್ಸನ್ನು ಕದಲದಂತೆ ಮಾಡಿದ್ದಾರೋ ಅವರೆ ನಿಮ್ಮ ಎಸ್.ಪಿ ಯವರಿಗೆ ಹೊಟ್ಟೆನೋವು ಬರುವಂತೆ ಮಾಡಿದ್ದಾರೆ. ಇದೆಲ್ಲವೂ ಅರ್ಥವಾಗಬೇಕೆಂದರೆ ಇದಕ್ಕೂ ಮೊದಲು ನಡೆದ ಕಥೆಯನ್ನು ತಿಳಿದುಕೊಂಡರೆ ಈಗಿನ ವಿಷಯ ಅರ್ಥವಾಗುತ್ತದೆ. ಹೇಳುತ್ತೇನೆ ಕೇಳು. ಪೂರ್ವದಲ್ಲಿ ಒಂದು ಚಿಕ್ಕ ಅಡವಿ ಇತ್ತು. ಅದರಲ್ಲಿ ಮಲ್ಲೇಶ್ವರ ಕೋನ ಎಂದು ಒಂದು ಶಿವನ ಗುಡಿ ಇತ್ತು. ಈಗಿನ ಅಡವಿಯಂತೆ ದೊಡ್ಡ ಅಡವಿ, ಈಗಿನ ಈಶ್ವರನ ಗುಡಿಯಷ್ಟು ಗುಡಿ ಅಲ್ಲದೆ ಹೋದರೂ ಚಿಕ್ಕ ಅಡವಿಯಲ್ಲಿ ಚಿಕ್ಕ ಗುಡಿ ಅಂದುಕೋ. ಆ ಅಡವಿಯಲ್ಲಿ ನಿತ್ಯವೂ ಜನ ಸಂಚಾರವೂ ಸಹ ಇರುತ್ತಿತ್ತು. ಆದರೆ ರಾತ್ರಿಹೊತ್ತು ಮಲ್ಲೇಶ್ವರ ಕೋನದಲ್ಲಿ ನರಸಂಚಾರ ಇರುತ್ತಿರಲಿಲ್ಲ. ಅಲ್ಲಿ ನೀರಿನ ಕೋನ ಸಹ ಇರುವುದರಿಂದ ಅದನ್ನು ಮಲ್ಲೇಶ್ವರ ಕೋನ ಅನ್ನುತ್ತಿದ್ದರು. ಆ ಕೋನ ಹತ್ತಿರ ಹಗಲೆಲ್ಲ ಭಕ್ತರ ಸಂಭ್ರಮ ಇರುತ್ತಿದ್ದರೂ, ರಾತ್ರಿ ಆಗುತ್ತಲೆ ಯಾರೂ ಗುಡಿ ಹತ್ತಿರ ಇರುತ್ತಿರಲಿಲ್ಲ. ಅದು ಒಂದು ಪುಣ್ಯಕ್ಷೇತ್ರವೆಂದು, ಅಲ್ಲಿ ರಾತ್ರಿಹೊತ್ತು ಋಷಿಗಳು ತಪಸ್ಸು ಮಾಡಿಕೊಳ್ಳುತ್ತಾರೆಂದು ವದಂತಿಯಿತ್ತು. ಆದ್ದರಿಂದ ರಾತ್ರಿಹೊತ್ತು ಯಾರೂ ಅಲ್ಲಿಗೆ ಹೋಗುತ್ತಿರಲಿಲ್ಲ. ಗುಡಿಗೆ ಮೂರು ಕಿಲೋಮೀಟರುಗಳ ದೂರದಲ್ಲಿಯೇ ಕೆಲವು ಊರುಗಳು ಇರುತ್ತಿದ್ದವು. ಒಂದು ಬೇಸಿಗೆ ಕಾಲದಲ್ಲಿ ಸುತ್ತ ಮುತ್ತ ಊರುಗಳಲ್ಲಿ ಕಳ್ಳತನಗಳು ಹೆಚ್ಚಾಗಿ ನಡೆಯುತ್ತಿದ್ದವು. ಕಳ್ಳರಿಗಾಗಿ ಪೋಲೀಸ್‌ರವರು ಕಾವಲು ಕಾದರು ಯಾರನ್ನೂ ಹಿಡಿದುಕೊಳ್ಳದೇ ಹೋದರು. ಸಂಬಂಧಿಸಿದ ಎಸ್.ಐ ರವರಿಗೆ ಕಳ್ಳರು ರಾತ್ರಿಹೊತ್ತು ಮಲ್ಲೇಶ್ವರ ಕೋನದಲ್ಲಿ ಬಚ್ಚಿಟ್ಟುಕೊಂಡು ಆಗಾಗ ಕಳ್ಳತನ ಮಾಡುತ್ತಾ ತಮಗೆ ಸಿಗದೆ ಇದ್ದಾರೆನ್ನುವ ಆಲೋಚನೆ ಬಂದಿದೆ. ಒಂದು ದಿನ ಇಬ್ಬರು ಪೋಲೀಸರೊಂದಿಗೆ ಸಹ ರಾತ್ರಿ ಏಳುಗಂಟೆಗೆ ಮಲ್ಲೇಶ್ವರ ಕೋನ ಸಮೀಪಕ್ಕೆ ಸೇರಿಕೊಂಡು ಸೈಕಲ್ ಮೋಟಾರ್‌ಗಳನ್ನು ಗುಡಿಗೆ ಫರ್ಲಾಂಗ್ ದೂರದಲ್ಲಿ ಪೊದೆಗಳ ಮರೆಯಲ್ಲಿಟ್ಟು ಕಾಲ್ನಡಿಗೆಯಲ್ಲಿ ರಹಸ್ಯವಾಗಿ ಕೋನ

ಹತ್ತಿರಕ್ಕೆ ಸೇರಿಕೊಂಡು ಒಂದು ಕಲ್ಲಿನ ಬಂಡೆಯ ಕೆಳಗೆ ಮರೆಯಲ್ಲಿ ಕುಳಿತು ಗಮನಿಸತೊಡಗಿದರು.

ರಾತ್ರಿ 12 ಗಂಟೆಗಳ ಸಮಯವಾಗಿದೆ, ಹಿಂದೆ ಬಂದಿರುವ ಪೊಲೀಸರಿಬ್ಬರು ನಿದ್ರೆಯೊಳಗೆ ಜಾರಿಕೊಂಡರು. ಎಸ್.ಐ ರವರು ಒಬ್ಬರು ಜಾಗ್ರತೆಯಿಂದ ಎಚ್ಚರದಿಂದ ಗಮನಿಸುತ್ತಿದ್ದಾರೆ. ಅಷ್ಟರಲ್ಲಿ ಸ್ವಲ್ಪ ಶಬ್ಧವಾಯಿತು. ಗುಡಿ ಮುಂದೆ ಒಂದು ಆಲದ ಮರ ಇದೆ. ಆ ಮರದ ಮೇಲೆ ಏನೋ ಅಲುಗಾಡಿದಂತೆ ಶಬ್ಧ. ತಕ್ಷಣವೆ ಎಸ್.ಐ ಅವರು ತನ್ನ ಜೊತೆಗೆ ತಂದುಕೊಂಡ ಐದು ಸೆಲ್‌ಗಳ ಟಾರ್ಚ್ ಕೈಗೆ ತೆಗೆದುಕೊಂಡನು. ಏನು ನಡೆಯುತ್ತಿದೆಯೆಂದು ನೋಡುತ್ತಿದ್ದಾನೆ. ಮರದ ಮೇಲೆ ಒಬ್ಬ ವ್ಯಕ್ತಿ ಇಳಿಯುವಂತೆ ಕಾಣಿಸುತ್ತಿದೆ. ಮರ ಇಳಿದ ವ್ಯಕ್ತಿ ಕತ್ತಲಲ್ಲಿ ಅಸ್ಪಷ್ಟವಾಗಿ ಕಾಣಿಸುತ್ತಿದ್ದಾನೆ. ಮನುಷ್ಯ ಆಜಾನುಬಾಹು, ಉದ್ದನೆಯ ಗಡ್ಡ ಇರುವವನು. ಮರ ಇಳಿದ ತಕ್ಷಣವೆ ಪಕ್ಕದಲ್ಲೆ ಇದ್ದ ನೀರಿನ ಕೋನದೊಳಗೆ ಹೋಗಿ ಸ್ನಾನ ಮಾಡುತ್ತಿದ್ದಾನೆ. ಎಸ್.ಐ. ಅವರಿಗೆ ಒಂದು ಕಡೆ ಭಯವಾಗುತ್ತಿದೆ. ಕಾನಿಸ್ಟೇಬಲ್ಸ್‌ರನ್ನು ತಟ್ಟಿದನು ಅವರು ಮೇಲೇಳಲಿಲ್ಲ. ಮಾಡುವುದೇನಿಲ್ಲವೆಂದು ಜಾಗ್ರತೆಯಿಂದ ನೋಡುತ್ತಿದ್ದಾನೆ. ಮರ ಇಳಿದ ಆಕಾರ ಸ್ನಾನ ಮುಗಿಸಿಕೊಂಡು ಶಿವನ ಗುಡಿ ಮುಂದೆ ಬಂದು ಕುಳಿತುಕೊಂಡಿತು. ಕುಳಿತಿರುವ ಆಕಾರ ಕದಲಿಲ್ಲ. ಯಾವುದೋ ಧ್ಯಾನದೊಳಗೆ ಹೊರಟುಹೋದಂತಿದೆ. ಹದಿನೈದು ನಿಮಿಷಗಳ ನಂತರ ಆ ಆಕಾರ ಎದ್ದು ನಿಧಾನವಾಗಿ ಮರದ ಕಡೆಗೆ ಹೋಗುತ್ತಿದೆ. ಆಗ ಎಸ್.ಐ ಅವರು ಸ್ವಲ್ಪ ಧೈರ್ಯವನ್ನು ಕೂಡಿಸಿಕೊಂಡು ಟಾರ್ಚ್ ಬೆಳಗಿಸಿದರು. ಟಾರ್ಚಿನ ಫೋಕಸ್ ಆ ಆಕಾರದ ಮೇಲೆ ಬಿದ್ದಿದೆ. ಆದರೆ ಆಕಾರ ಕಾಣಿಸಲಿಲ್ಲ. ಲೈಟ್‌ಫೋಕಸ್ ಆಕಾರದಲ್ಲಿ ತೂರಿ ಆ ಕಡೆ ಬೆಟ್ಟದಕಲ್ಲುಗಳ ಮೇಲೆ ಬಿದ್ದು ಕಲ್ಲುಗಳು ಕಾಣಿಸುತ್ತಿವೆ. ತಕ್ಷಣವೇ ಟಾರ್ಚ್ ಆಫ್ ಮಾಡಿದನು. ಮತ್ತೆ ಆಕಾರ ಕಾಣಿಸುತ್ತಿದೆ. ಆಕಾರ ಮರದ ಕಡೆಗೆ ಹೋಗುತ್ತಲೇ ಇದೆ. ಮತ್ತೊಂದು ಬಾರಿ ಎಸ್.ಐ ಟಾರ್ಚ್ ಹಾಕಿದನು. ಆದರೂ ಮೊದಲ ಹಾಗೆಯೇ ಏನೂ ಕಾಣಿಸಲಿಲ್ಲ.

ತಕ್ಷಣವೇ ಆಫ್ ಮಾಡಿದನು. ಆಕಾರ ಮೊದಲಿನ ಹಾಗೆಯೇ ಕಾಣಿಸುತ್ತಿದೆ. ಅದು ಮರದ ಹತ್ತಿರಕ್ಕೆ ಹೋಗುತ್ತಲೇ ಇದೆ. ಕೊನೆಗೆ ಮರದ ಹತ್ತಿರಕ್ಕೆ ಹೋಗಿ ತಿರುಗಿ ನೋಡಿತು. ಅದು ಸಹ ಎಸ್.ಐ ಕಡೆಗೆ ನೋಡಿದಂತನಿಸಿತು. ಆದ್ದರಿಂದ ಎಸ್.ಐ ಸ್ವಲ್ಪ ಭಯಪಟ್ಟು ನಿಸ್ಸಹಾಯಕನಾದನು. ಆ ಆಕಾರ ಮರ ಹತ್ತಿಹೋಯಿತು. ಮರ ಇಳಿಯುವಾಗ ಮರದ ಕೊಂಬೆಗಳಲ್ಲಿ ಹೇಗೆ ಶಬ್ಧವಾಗಿದೆಯೊ ಮರ ಹತ್ತುವಾಗಲು ಸಹ ಆ ವಿಧವಾಗಿಯೇ ಮರದ ಕೊಂಬೆಗಳಲ್ಲಿ ಶಬ್ದವಾಯಿತು. ಮಾಡುವುದೇನು ಇಲ್ಲದೆ ಎಸ್.ಐ ಅಲ್ಲಿಯೇ ರಾತ್ರಿಯೆಲ್ಲ ಇದ್ದನು. ಕಳ್ಳರ ಸುಳಿವು ತಿಳಿಯಲಿಲ್ಲ ಆದರೆ ಅಂದುಕೊಳ್ಳದ ಅನುಭವ ಎದುರಾಯಿತು.

ಈ ಸಂಘಟನೆಯಿಂದ ಪ್ರಜೆಗಳು ರಾತ್ರಿಹೊತ್ತು ಅಲ್ಲಿಗೆ ಏಕೆ ಬರುವುದಿಲ್ಲವೊ ಅರ್ಥವಾಯಿತು. ಅಷ್ಟೇ ಅಲ್ಲದೆ ಅವರು ಅಂದುಕೊಳ್ಳುವ ಮಾತುಗಳಲ್ಲಿ ಸಹ ಸ್ವಲ್ಪ ಸತ್ಯವಿರುವಂತೆ ತಿಳಿಯಿತು. ಪ್ರಜೆಗಳು ಯಾರು ಅಲ್ಲಿಗೆ ಹೋಗುವುದಿಲ್ಲವಾದ್ದರಿಂದ ಕಳ್ಳರು ಸಹ ಅಲ್ಲಿಗೆ ಹೋಗುವುದಿಲ್ಲವೆಂದು ನಿರ್ಧಾರಕ್ಕೆ ಬಂದನು. ಆದರೆ ಆ ದಿನದಿಂದ ಆ ಎಸ್.ಐ.ಗೆ ಹೊಟ್ಟೆನೋವು ಪ್ರಾರಂಭವಾಯಿತು. ಎಷ್ಟು ಆಸ್ಪತ್ರೆಗಳು ತಿರುಗಿದರೂ ಸರಿಹೋಗಲಿಲ್ಲ. ಆ ದಿನದಿಂದಲೆ ನೋವು ಬಂದಿರುವುದರಿಂದ ಆ ಸಂಘಟನೆಗೂ ಇದಕ್ಕೂ ಏನಾದರೂ ಸಂಬಂಧವಿದೆಯೇನೋ ಎಂದು ಅನುಮಾನ ಬಂದು ತಾಯತಗಳನ್ನು ಸಹ ಕಟ್ಟಿಸಿಕೊಂಡನು. ಆದರೂ ಗುಣವಾಗಲಿಲ್ಲ. ಈಗ ನಿಮ್ಮ ಹಾಗೆ ಅವರು ನನ್ನ ಬಳಿಗೆ ಬಂದು ಎಲ್ಲಾ ಹೇಳಿದರು. ಈಗ ನಿಮಗೆ ಹೇಳಿದಂತೆ ಆ ದಿನವೂ ಸಹ ಆ ನೋವು ಔಷಧಗಳಿಗೆ, ಮಂತ್ರಗಳಿಗೆ ಹೋಗುವುದಿಲ್ಲವೆಂದು ಹೇಳಿದೆನು. ಎಸ್.ಐ ರವರನ್ನೆ ನನ್ನ ಬಳಿಗೆ ಕರೆಸಿಕೊಂಡು ನೋಡಿದೆನು ಪರಿಸ್ಥಿತಿಯೆಲ್ಲಾ ಅರ್ಥವಾಯಿತು. ಆ ದಿನ ಮರದಿಂದ ಇಳಿದು ಬಂದಿರುವುದು ಒಬ್ಬ ದೊಡ್ಡ ಯೋಗಿ. ಆತನು ಎಷ್ಟೋ ವರ್ಷಗಳಿಂದ ಆ ಮರದ ಮೇಲೆ ನಿವಾಸ ಮಾಡುತ್ತಾ ಪ್ರತಿ ದಿನ ಅರ್ಧರಾತ್ರಿ ಸಮಯದಲ್ಲಿ

ಯೋಗ ಮಾಡಿಕೊಂಡು ಹೋಗುತ್ತಿದ್ದನು. ಹಾಗೆ ಹೋಗುವವನ ಮೇಲೆ ಲೈಟ್ ಹಾಕಿರುವುದರಿಂದ ಆತನಿಗೆ ಸ್ವಲ್ಪ ಅಸೌಕರ್ಯ ಉಂಟಾಯಿತು. ಮರದ ಹತ್ತಿರಕ್ಕೆ ಹೋಗಿ ಕೊನೆಗೆ ನೋಡಿ ಹೋದನು. ಅಲ್ಲಿಯವರೆಗು ಆ ಪ್ರಾಂತಕ್ಕೆ ಯಾರೂ ರಾತ್ರಿ ಹೊತ್ತು ಹೋಗಲಿಲ್ಲ. ಹಾಗೇ ರಾತ್ರಿ ಹೋಗುವುದು ಒಂದು ತಪ್ಪು, ಲೈಟ್ ಹಾಕಿ ನೋಡುವುದು ಎರಡನೆ ತಪ್ಪು. ಈ ತಪ್ಪುಗಳಿಗೆ ಶಿಕ್ಷೆಯಾಗಿ ಹೊಟ್ಟೆನೋವು ಬಂದಿದೆ. ಹೊಟ್ಟೆನೋವಿಗೆ ಕಾರಣ ತಿಳಿಯಿತು. ಯೋಗ ಮಾಡುವ ಯೋಗಿಗೆ ಅನುಚರನೊಬ್ಬನು ಇದ್ದಾನೆ. ಆತನು ಯೋಗಿಯವೊಂದು ಸೇವೆ ಮಾಡಿಕೊಳ್ಳುತ್ತಿದ್ದಾನೆ. ಆತನು ಯೋಗಿಯ ಯೋಗ ಮುಗಿದ ನಂತರ ಯೋಗ ಮಾಡಿಕೊಳ್ಳುತ್ತಿದ್ದನು. ಆತನು ಸಹ ಕಾಣಿಸದವನೆ ಆ ದಿನ ಪಕ್ಕದಲ್ಲಿದ್ದು ಗಮನಿಸಿದ ಅನುಚರನು ಯೋಗಿಯ ಆಜ್ಞೆಯಿಂದಲೇ ಬಂದು ಎಸ್.ಐ ಹೊಟ್ಟೆನೋವಿನಂತೆ ಬದಲಾಗಿದ್ದಾನೆ. ಅದೆಲ್ಲಾ ತಿಳಿದ ನಾನು ಆ ಇಬ್ಬರಿಗು ತಿಳಿಸಿ ಹೇಳಿರುವುದರಿಂದ ಅಂದಿನಿಂದ ಹೊಟ್ಟೆನೋವು ಇಲ್ಲದಂತೆ ಹೋಗಿದೆ. ಇದೆಲ್ಲವೂ ಕಲ್ಪಿತ ಕಥೆಯಲ್ಲ ನಡೆದ ಯಥಾರ್ಥ. ಆ ದಿನ ನಡೆದ ಹಾಗೇ ಈ ದಿನ ನಡೆದಿದೆಯೆಂದು ನಾನು ಅಂದುಕೊಳ್ಳುತ್ತಿದ್ದೇನೆ. ಹೊರಗಿನ ಪ್ರಪಂಚದಲ್ಲಿ ಎಷ್ಟು ದೊಡ್ಡ ಅಧಿಕಾರಿಯಾದರೂ ದೈವದ ದೃಷ್ಟಿಯಲ್ಲಿ ಸಾಧಾರಣ ಮನುಷ್ಯನೆ. ಹಾಗೆ ಕಾಣಿಸದ ಯೋಗಿಗಳ ದೃಷ್ಟಿಯಲ್ಲಿ ಕೂಡಾ. ಪವಿತ್ರ ಕ್ಷೇತ್ರಗಳಲ್ಲಿ ಕೆಲವು ನಿಬಂಧನೆಗಳಿರುತ್ತವೆ. ಅವುಗಳನ್ನು ಯಾರೂ ಅತಿಕ್ರಮಿಸಬಾರದು. ನಮ್ಮದು ಪೋಲೀಸ್ ಡಿಪಾರ್ಟ್‌ಮೆಂಟ್ ಎಂದು ಅಂದುಕೊಂಡರೂ ಪ್ರಯೋಜನವಿಲ್ಲ. ಪೋಲೀಸರಾಗಲಿ, ಮೇಲಿನ ಅಧಿಕಾರಿಗಳಾಗಲಿ ಎಲ್ಲರೂ ಮನುಷ್ಯರೇ ಆಗಿರುವುದರಿಂದ, ನಿಬಂಧನೆಗಳು ಅತಿಕ್ರಮಿಸುವುದರಿಂದ ಬರುವ ಶಿಕ್ಷೆ ಯಾರಿಗಾದರೂ ಆಗಬಹುದು. ಆ ದಿನ ನೀವು ಕಾಡಿಗೆ ಹೋಗುವುದಕ್ಕೆ ಕಾರಣ ನಿಮ್ಮ ಎಸ್.ಪಿ ಯವರೇ ಆದ್ದರಿಂದ ಆತನಿಗೆ ಶಿಕ್ಷೆ ಆಗಿದೆಯೆಂದು ಅಂದುಕೊಳ್ಳುತ್ತೇನೆ. ಪ್ರತಿ ವಿಷಯಕ್ಕೂ ಒಂದು ಪರಿಹಾರ ಮಾರ್ಗ ಇರುತ್ತದೆ. ಆದ್ದರಿಂದ ಏನು ನಡೆದಿದೆ? ಏಕೆ ಹೊಟ್ಟೆನೋವು ಬಂದಿದೆ? ಎಂದು ವಿವರ ತಿಳಿಯಬೇಕೆಂದರೆ ಹೊಟ್ಟೆನೋವು ಇರುವಾಗ ನಿಮ್ಮ ಎಸ್.ಪಿಯವರನ್ನು

ನೋಡಬೇಕು. ಹಾಗೆ ನೋಡದೆ ಹೋದರೆ ನನಗೆ ಅರ್ಥವಾಗದು. ಮೊದಲು ನಿಮ್ಮ ಎಸ್.ಪಿ ಯವರನ್ನು ಕರೆದುಕೊಂಡು ಬಾ ನಂತರ ಎಲ್ಲಾ ತಿಳಿಯಬಹುದು.

**ಡಿ.ಎಸ್.ಪಿ :** ಚೆಕ್‌ಪೋಸ್ಟ್ ಸಂಘಟನೆಯ ವಿಷಯ ಹೇಳಲಿಲ್ಲ ಸ್ವಾಮಿ.

**ಗಿರೀಶಾನಂದ :** ಎಲ್ಲರಿಗೂ ಒಂದೇ ಬಾರಿ ಔಷಧ ಕೊಡುವುದಕ್ಕೆ ನಾನು ವೈಧ್ಯನಲ್ಲ, ತಾಯತ ಕೊಡುವುದಕ್ಕೆ ಮಂತ್ರಗಾರನಲ್ಲ. ಇದೆಲ್ಲವೂ ಯೋಚಿಸಿ ಮಾಡಬೇಕಾದ ಕೆಲಸ. ನನ್ನ ಮಾರ್ಗ ಜ್ಞಾನ ಮಾರ್ಗ. ನಾಳೆ ಈ ಸಂಘಟನೆಗಳಿಂದ ಜ್ಞಾನಿಗಳಂತೆ ಬದಲಾಗುತ್ತೀರೆಂಬ ನಂಬಿಕೆಯಿಂದ ನಿಮ್ಮನ್ನು ನೋಡುತ್ತೇನೆಂದು ಹೇಳುತ್ತಿದ್ದೇನೆ ಆದರೆ ಬೇರೆ ಮಾರ್ಗವಲ್ಲ. ಅಜ್ಞಾನಕ್ಕೆ, ಜ್ಞಾನಕ್ಕೆ ಮಧ್ಯದಲ್ಲಿರುವ ವ್ಯತ್ಯಾಸವು ತಿಳಿಸುವುದಕ್ಕೆ ಈ ಸಂಘಟನೆಗಳು ಕೆಲಸಕ್ಕೆ ಬರುತ್ತವೆಂದು, ಇವುಗಳಿಂದ ಸ್ವಲ್ಪವಾದರೂ ಜ್ಞಾನವಿವರ ತಿಳಿಯಬಹುದೆಂದು ನಿಮ್ಮನ್ನು ಬರುವುದಕ್ಕೆ ಹೇಳಿದ್ದೇನೆ. ನಿಮ್ಮ ಎಸ್.ಪಿ ಯವರ ಸಮಸ್ಯೆ ಮುಗಿದ ನಂತರ ಆತನ ವಿಧಾನವನ್ನು ಅನುಸರಿಸಿ ಉಳಿದ ಸಮಸ್ಯೆಯನ್ನು ನೋಡ ಬಹುದು. ಅಷ್ಟೇ ಆಗಲಿ ಸಮಸ್ಯೆಗಳನ್ನು ತೀರಿಸುವುದು ನನ್ನ ಕೆಲಸವಲ್ಲ.

ಆ ಮಾತುಗಳನ್ನು ಕೇಳಿದ ಡಿ.ಎಸ್.ಪಿ ಯವರು ಸ್ವಾಮಿಯವರಿಗೆ ನಮಸ್ಕರಿಸಿ ಹೊರಟು ಹೋಗಿ ನಡೆದ ವಿಷಯವನ್ನೆಲ್ಲಾ ಎಸ್.ಪಿ ಯವರಿಗೆ ತಿಳಿಸಿದರು. ಎಲ್ಲಾ ಕೇಳಿದ ನಂತರ ಗಿರೀಶಾನಂದ ಸ್ವಾಮಿಯವರ ಹತ್ತಿರ ತನ್ನ ಹೊಟ್ಟೆನೋವು ಗುಣವಾಗಬಹುದೆಂದು ಎಸ್.ಪಿ ಯವರು ನಂಬಿದರು. ಸ್ವಲ್ಪ ದಿನಗಳು ಡ್ಯೂಟಿಗೆ ರಜಾ ಹಾಕಿ ಹೊರಟು ಗಿರೀಶಾನಂದ ಸ್ವಾಮಿಯ ಬಳಿಗೆ ಹೋದರು. **ಅಲ್ಲಿಯವರೆಗು ದೇವರು ದೆವ್ವಗಳೆಂದರೆ ನಂಬದ ಎಸ್.ಪಿ ತನ್ನದು ತಪ್ಪು ಊಹೆಯೆಂದು ಅಂದುಕೊಂಡನು. ಎಷ್ಟೋ ಮಹಾನುಭಾವರು ಭೂಮಿ ಮೇಲೆ ಇರುವರೆಂದು, ಅವರು ತನಗಿಂತ ಎಷ್ಟೋ ಹೆಚ್ಚು ತಿಳಿದವರೆಂದು ತನಗೆ ಕಾಣಿಸುವ ಪ್ರಪಂಚದಲ್ಲಿ ಕೆಲವು ಬಿಟ್ಟು ಎಲ್ಲಾ ವಿಷಯಗಳು ತಿಳಿಯದೆಂಬ ಭಾವನೆಯೊಳಗೆ ಬಂದನು.** ಮರುದಿನ ಗಿರೀಶಾನಂದ ಸ್ವಾಮಿ ದರ್ಶನಕ್ಕೆ ಆತನ ನಿವಾಸಕ್ಕೆ ಹೋದನು. ಎಸ್.ಪಿ ಯವರೊಂದಿಗೆ ಡಿ.ಎಸ್.ಪಿ ಯವರು, ಎಸ್.ಪಿ

ಯವರ ತಂದೆ, ಅವರ ಬಂಧುಗಳು ಇಬ್ಬರು ಒಟ್ಟು ಐದು ಜನ ಹೋದರು. ಬೆಳಗ್ಗೆ 8 ಘಂಟೆಗಳ ಸಮಯದಲ್ಲಿ ಗಿರೀಶಾನಂದ ಸ್ವಾಮಿ ಬಂದು ತನ್ನ ಸ್ಥಳದಲ್ಲಿ ಕುಳಿತುಕೊಂಡನು. ಗಿರೀಶಾನಂದ ಸ್ವಾಮಿ ಕೆಳಗೆ ಕುಳಿತುಕೊಳ್ಳುವುದನ್ನು ನೋಡಿ ಎಲ್ಲರೂ ಕೆಳಗೆ ಕುಳಿತುಕೊಂಡರು. ಸ್ವಾಮಿಯವರಿಗೆ ಎಸ್.ಪಿಯವರನ್ನು ಡಿ.ಎಸ್.ಪಿ ಪರಿಚಯ ಮಾಡಿಸಿದನು. ಎಸ್.ಪಿ ಯವರನ್ನು ತನ್ನ ಮುಂದೆ ಕುಳಿತುಕೊಳ್ಳಲು ಸ್ವಾಮಿ ಹೇಳಿದರು. ಎಸ್.ಪಿ ಯವರು ಹಾಗೆ ಕುಳಿತುಕೊಂಡು ನಮಸ್ಕರಿಸಿದನು.

**ಸ್ವಾಮಿ :** ನೀವು ಯಾವ ಉದ್ದೇಶದಿಂದ ನನ್ನ ಬಳಿಗೆ ಬಂದಿದ್ದೀರಾ.

**ಎಸ್.ಪಿ :** ತಾವು ದೊಡ್ಡ ವ್ಯಕ್ತಿಗಳೆಂದು, ತಮ್ಮ ಮೇಧಸ್ಸು ದೊಡ್ಡದೆಂದು, ತಮಗಿರುವ ದೈವಜ್ಞಾನ ದೊಡ್ಡದೆಂದು, ತಮ್ಮ ಜ್ಞಾನ ಶಕ್ತಿಯಿಂದಲೇ ನನಗಿರುವ ಈ ರೋಗ ಹೋಗಬಹುದೆಂಬ ನಂಬಿಕೆಯಿಂದ ಬಂದಿದ್ದೇನೆ ಸ್ವಾಮಿ.

**ಸ್ವಾಮಿ :** ನೀವು ಇಲ್ಲಿಗೆ ಎಸ್.ಪಿ ಯಂತೆ ಬಂದಿದ್ದೀರಾ ಇಲ್ಲವೆ ಸಾಧಾರಣ ಮನುಷ್ಯನಂತೆ ಬಂದಿದ್ದೀರಾ!

**ಎಸ್.ಪಿ :** ನಾನು ನನ್ನ ಹುದ್ದೆಯನ್ನು ಮನೆಹತ್ತಿರ ಬಿಟ್ಟು ಅದಕ್ಕೆ ರಜಾ ಹಾಕಿ ಎಸ್.ಪಿ ಯಹಾಗಲ್ಲದೆ ಸಾಧಾರಣ ಮನುಷ್ಯನಂತೆ ಬಂದಿದ್ದೇನೆ ಸ್ವಾಮಿ.

**ಸ್ವಾಮಿ :** ಸರಿ ಒಳ್ಳೆಯದೆ! ನಿನ್ನನ್ನು ನಾನು ಸಾಧಾರಣ ಮನುಷ್ಯನಂತೆ ಮಾತನಾಡಿಸುತ್ತೇನೆ ನಾನು ಕೇಳಿದ ಪ್ರಶ್ನೆಗಳಿಗೆ ಉತ್ತರಗಳನ್ನು ಹೇಳು. ನಿನಗೆ ಎಷ್ಟು ದಿನಗಳಿಂದ ಹೊಟ್ಟೆ ನೋವು ಇದೆ.

**ಎಸ್.ಪಿ :** ಸುಮಾರು ಒಂದು ತಿಂಗಳಿಂದ ಇದೆ ಸ್ವಾಮಿ.

**ಸ್ವಾಮಿ :** ನೀನು ನನ್ನ ಮುಂದೆ ಕುಳಿತು ಗಮನವಿಟ್ಟು ನನ್ನ ಮುಖದ ಕಡೆಗೆ ನೋಡು. ಈಗ ನಿನಗೆ ಹೊಟ್ಟೆನೋವು ಇದೆಯಾ?

**ಎಸ್.ಪಿ :** ಇಲ್ಲ ಸ್ವಾಮಿ. ಈಗ ಚನ್ನಾಗಿಯೇ ಇದೆ. ಬಹುಶಃ ಸಾಯಂಕಾಲ ಬರಬಹುದೆಂದುಕೊಂಡಿದ್ದೇನೆ.

**ಸ್ವಾಮಿ :** ಆ ನೋವನ್ನು ಈಗಲೆ ಕರೆಯುತ್ತೇನೆ. ನೀನು ಈ ನೋವಿನಿಂದಿರು ವಾಗಲೆ ಎಲ್ಲಾ ವಿಷಯಗಳು ನನಗೆ ತಿಳಿಯುವುದು.

ಈ ವಿಧದಲ್ಲಿ ಹೇಳಿದ ಗಿರೀಶಾನಂದ ಸ್ವಾಮಿಯವರು ಎಸ್.ಪಿಯ ವರನ್ನು ತೀಕ್ಷಣವಾಗಿ ನೋಡಿದರು. ತಕ್ಷಣವೇ ಹೊಟ್ಟೆಯಲ್ಲಿ ನೋವು ಪ್ರಾರಂಭವಾಯಿತು. ಆ ವಿಷಯ ಎಸ್.ಪಿ ಯವರು ಸ್ವಾಮಿಗೆ ತಿಳಿಸಿದರು. ಸರಿಯೆಂದು ತಲೆಯಲ್ಲಾಡಿಸಿದ ಸ್ವಾಮಿಯವರು ಆ ನೋವು ಎಲ್ಲಿದೆಯೊ ಕರೆಕ್ಟಾಗಿ ಬೆರಳಿಟ್ಟು ತೋರಿಸೆಂದರು. ಎಸ್.ಪಿ ಯವರು ಆ ವಿಧವಾಗಿಯೆ ತೋರಿಸಿದನು. ಸ್ವಾಮಿ ತಕ್ಷಣವೆ ಬೆರಳಿಟ್ಟು ತೋರಿಸಿದ ಭಾಗವನ್ನು ನೋಡಿದನು. ಅಷ್ಟೇ ಅಲ್ಲಿಯವರೆಗು ತೋರಿಸಿದ ಜಾಗದಲ್ಲಿ ನೋಯುತ್ತಿದ್ದ ನೋವು ತಕ್ಷಣವೇ ಭುಜದೊಳಗೆ ಬಂದಿತು. ಎಸ್.ಪಿ. ಯವರು ಆ ವಿಷಯವನ್ನು ಸ್ವಾಮಿಯವರಿಗೆ ಹೇಳಿದನು. ಎಲ್ಲಿದೆಯೊ ಬೆರಳಿಟ್ಟು ತೋರಿಸೆಂದನು ಸ್ವಾಮಿ. ಆತನು ಹಾಗೆ ಮಾಡಿದನು. ಸ್ವಾಮಿ ಭುಜದ ಕಡೆಗೆ ನೋಡುತ್ತಿದ್ದ ಹಾಗೆ ಆ ನೋವು ಅಲ್ಲಿ ನಿಲ್ಲಲಿಲ್ಲ. ತಕ್ಷಣವೆ ಬೆನ್ನಿನ ಮೇಲೆ ಹೋಯಿತು ಸ್ವಾಮಿಯವರು ನೋಡುತ್ತಲೆ ನೋವು ಹಾಗೆಯೇ ಜಾಗ ಬದಲಾಯಿಸಿ ಹೋಗುವುದು ಎಸ್.ಪಿ ಯವರಿಗೆ ವಿಚಿತ್ರವಾಗಿ ತೋಚಿತು. ಪಕ್ಕದಲ್ಲಿರುವ ಡಿ.ಎಸ್.ಪಿ ಯವರು ಉಳಿದವರು ಎಲ್ಲರೂ ಆಶ್ಚರ್ಯಪಟ್ಟರು. ಹಿಂತಿರುಗಿ ಬೆನ್ನನ್ನು ಸ್ವಾಮಿಗೆ ತೋರಿಸಿದನು ಸ್ವಾಮಿ ಎಸ್.ಪಿ ಬೆನ್ನಿನ ಕಡೆಗೆ ನೋಡಿದರು. ಅಲ್ಲಿಯವರೆಗು ಬೆನ್ನಿನಲ್ಲಿರುವ ನೋವು ಒಂದೆಬಾರಿಗೆ ಮಂಡಿಯೊಳಗೆ ಬಂದಿತು. ಆ ವಿಷಯ ಸ್ವಾಮಿಯವರಿಗೆ ಹೇಳಿ ಮೊಣಕಾಲನ್ನು ತೋರಿಸಿದರು ಎಸ್.ಪಿ ಮತ್ತೆ ಸ್ವಾಮಿ ಮೊಣಕಾಲಿನ ಕಡೆಗೆ ನೋಡಿದನು. ಸ್ವಾಮಿ ದೃಷ್ಠಿ ಸೋಕಿದಾಗ ಆ ನೋವು ಅಲ್ಲಿ ನಿಲ್ಲಲಿಲ್ಲ. ತಕ್ಷಣವೆ ತಲೆಯೊಳಗೆ ಸೇರಿಕೊಂಡಿತು. ಅದೇ ವಿಷಯವನ್ನೇ ಸ್ವಾಮಿಗೆ ತಿಳಿಸಿ ತಲೆಯನ್ನು ತೋರಿಸಿದನು ಎಸ್.ಪಿ ಸ್ವಾಮಿಯವರ ದೃಷ್ಠಿಗೆ ತಾಳಲಾರದ ನೋವು ತಲೆಯನ್ನು ಸಹ ಬಿಟ್ಟು ಮತ್ತೆ ಹೊಟ್ಟೆಯೊಳಗೆ ಬಂದಿತು. ಸ್ವಾಮಿಗೆ ಸಹನೆ ಇಲ್ಲದಂತಾಯಿತು. ಮಾಡುವುದೇನು ಇಲ್ಲ ಎಂದು ಹೀಗೆಂದನು.

**ಸ್ವಾಮಿ :** ನೀನು ನನ್ನ ದೃಷ್ಠಿಗೆ ಭಯಪಟ್ಟು ಇರುವ ಜಾಗವನ್ನು ಬಿಟ್ಟು ಬೇರೆ ಜಾಗಕ್ಕೆ ಬದಲಾಗುತ್ತಿದ್ದೀಯ ಹಾಗೆ ಮಾಡಬೇಡ. ನಾನು ನಿನಗೆ ಶತ್ರುವು ಅಲ್ಲ ತಾನೆ! ನಿನಗೆ ನನ್ನಿಂದ ಯಾವ ಹಾನಿ ಇರುವುದಿಲ್ಲ. ನೀನು ಇರುವ ಜಾಗದಲ್ಲಿಯೆ ಇದ್ದರೆ ನಾನು ನಿನ್ನನ್ನು ನೋಡಬಹುದು. ನನ್ನ ನೋಟದಿಂದ ನಿನಗೆ ಎಂತಹ ಹಾನಿ ಇರದು. ನಾನು ನಿನ್ನನ್ನು ನೋಡಿದರೆ ಎಲ್ಲ ವಿವರಗಳು ನನಗೆ ಅರ್ಥವಾಗುತ್ತವೆ. ಹಾಗಿರುವಾಗ ನಾನು ನಿನಗಾಗಲಿ ನಂತರ ಈ ಎಸ್.ಪಿ ಗಾಗಲಿ ಏನಾದರೂ ಒಳ್ಳೆದು ಮಾಡಬಹುದು. ಸಮಸ್ಯೆ ಅರ್ಥವಾಗದಿರುವಾಗ ನಾನೇನು ಸಹಾಯ ಮಾಡಲಾರೆನಲ್ಲವೆ! ಆದ್ದರಿಂದ ನೀನು ಜಾಗ ಬದಲಾಯಿಸ ಬೇಡ.

ಸ್ವಾಮಿಯವರು ಹೇಳಿದ ಮಾತುಗಳಿಂದ ನೋವು ಹೊಟ್ಟೆಯಲ್ಲೆ ನಿಂತು ಹೋಯಿತು. ಸ್ವಾಮಿಯವರು ತದೇಕವಾಗಿ ಹೊಟ್ಟೆಯನ್ನು ನೋಡಿದನು. ಐದು ನಿಮಿಷಗಳವರೆಗು ನೋಡಿದ ಸ್ವಾಮಿ ಇನ್ನು ನಿಮ್ಮ ಸಮಸ್ಯೆ ಅರ್ಥವಾಯಿತು ಇನ್ನು ನೀನು ಹೊರಟು ಹೋಗಬಹುದು. ನಿನಗೆ ತಕ್ಕ ವಿಧದಲ್ಲಿ ನಾನು ಮಾಡಿಸುತ್ತೇನೆಂದು ಹೊಟ್ಟೆಕಡೆಗೆ ನೋಡುತ್ತ ಹೇಳಿದನು. ಆ ಮಾತುಗಳಿಂದ ಯಾವುದೊ ಕಂಡೀಷನ್ ಮೇಲೆ ನೋವನ್ನು ಹೋಗೆಂದು ಹೇಳಿದ ಹಾಗೆ ಹೊರಗಿನವರು ಅರ್ಥ ಮಾಡಿಕೊಂಡರು. ಸ್ವಾಮಿ ಇನ್ನು ನೀನು ಹೊರಡಬಹುದೆಂದು ಹೊಟ್ಟೆಕಡೆಗೆ ನೋಡಿ ಹೇಳುತ್ತಲೆ ನೋವು ತಕ್ಷಣವೆ ಮಾಯವಾಗಿ ಹೋಗಿದೆ. ಎಸ್.ಪಿ ಯವರಿಗೆ ತಕ್ಷಣವೆ ಬಾಧೆಯಿಂದ ವಿಮುಕ್ತಿಯಾಯಿತು. ಇದೆಲ್ಲವೂ ಯಾರಿಗೂ ಏನೂ ಅರ್ಥವಾಗಲಿಲ್ಲ. ಆದರೆ ನೋವು ಇಲ್ಲದಂತೆ ಹೋಯಿತು. ಕರೆದ ತಕ್ಷಣವೆ ಬರುವುದು, ನಿಂತುಕೊ ಎಂದು ಹೇಳಿದಾಗ ನಿಂತುಕೊಂಡಿರುವುದು, ಹೋಗೆಂದು ಹೇಳಿದಾಗ ನೋವು ಹೋಗಿರುವುದು ನೋಡಿದರೆ ಸ್ವಾಮಿಯವರು ಸಾಮಾನ್ಯರಲ್ಲವೆಂದು ಉಳಿದವರಿಗೆಲ್ಲರಿಗೂ ಅರ್ಥವಾಯಿತು. ಸ್ವಾಮಿಯವರು ಎಸ್.ಪಿ ಕಡೆಗೆ ನೋಡಿ ಹೀಗೆ ಹೇಳಿದನು.

**ಸ್ವಾಮಿ :** ಇನ್ನು ನೀನು ನಿರ್ಭಯವಾಗಿ ಮನೆಗೆ ಹೋಗಬಹುದು. ಇನ್ನು ಮುಂದೆ ಆ ನೋವು ಬಾರದಂತೆ ಏರ್ಪಾಟು ಮಾಡಿದ್ದೇನೆ. ನೀನು ಎಷ್ಟು ಕಾಲ ದೈವಜ್ಞಾನವನ್ನು ತಿಳಿದುಕೊಳ್ಳುತ್ತಾ ದೈವಜ್ಞಾನಕ್ಕೆ ಬೆಲೆಕೊಡುತ್ತೀಯೊ ಅಷ್ಟು ಕಾಲ ಆ ನೋವು ನಿನ್ನ ಹತ್ತಿರಕ್ಕೆ ಬರುವುದಿಲ್ಲ. ಆ ಮಾತುಗಳನ್ನು ಕೇಳಿದ ಎಸ್.ಪಿ ಯವರು ಸರಿಯೆಂದು ಒಪ್ಪಿಕೊಂಡನು. ಚೆಕ್‌ಪೋಸ್ಟಿನ ವಿಷಯವನ್ನು ಕುರಿತು ಡಿ.ಎಸ್.ಪಿ ಯವರು ಸ್ವಾಮಿಯನ್ನು ಕೇಳಿದರೆ ನಂತರ ವಾರದ ದಿನಗಳಲ್ಲಿ ಬರಲು ಹೇಳಿದನು. ಹಾಗೆಯೇ ಆಗಲೆಂದು ಅಲ್ಲಿಂದ ಎಲ್ಲರು ಬಂದರು. ಸ್ವಾಮಿಯವರ ಮುಂದೆ ನಡೆದ ಸಂಘಟನೆಯನ್ನು ಯಾರಿಗಾದರೂ ಹೇಳಿದರು ನಂಬುವುದಿಲ್ಲವೆಂದುಕೊಂಡರು. ಕರೆದ ತಕ್ಷಣವೆ ನೋವು ಬಂದಿದೆಯೆಂದರೆ, ಹೋಗೆಂದು ಹೇಳಿದ ತಕ್ಷಣವೆ ಹೋಗಿದೆಯೆಂದರೆ ಸ್ವಾಮಿ ಮಾತನ್ನು ತಪ್ಪದಂತೆ ಕೇಳಿದಂತೆಂದು ಅವರಿಗೆ ಅರ್ಥವಾಯಿತು. ಸ್ವಾಮಿ ಮಾತನ್ನು ತಾವು ಅನುಸರಿಸಿ ಜ್ಞಾನವನ್ನು ತಿಳಿದುಕೊಂಡರೆ ಇನ್ನು ಆತನ ಮಾತನ್ನು ಅತಿಕ್ರಮಿಸಿ ನೋವು ಬರುವುದಿಲ್ಲವೆಂದುಕೊಂಡರು. ಸ್ವಾಮಿಯವರ ದೊಡ್ಡತನವನ್ನು ಕುರಿತು ತಮ್ಮಲ್ಲಿ ತಾವು ಎಷ್ಟೋ ಬಾರಿ ಅಂದುಕೊಂಡರು. ಸ್ವಾಮಿ ಮಾತಿನ ಪ್ರಕಾರ ಆ ನೋವು ಆ ದಿನದಿಂದ ಎಸ್.ಪಿಯವರಿಗೆ ಬರಲಿಲ್ಲ.

ವಾರದ ದಿನಗಳಿಗೆ ಡಿ.ಎಸ್.ಪಿ ಯವರು ಮತ್ತೆ ಸ್ವಾಮಿಯ ಹತ್ತಿರಕ್ಕೆ ಬಂದರು. ಈ ಬಾರಿ ಚೆಕ್‌ಪೋಸ್ಟಿನ ವಿಷಯ ಕೇಳಿದರು. ಸ್ವಾಮಿಯವರು ತಲೆಯಾಡಿಸಿ ಆ ವಿಷಯ ನಿನಗೆ ಅರ್ಥವಾಗಬೇಕೆಂದರೆ ಒಂದು ಕಡೆ ನಡೆದ ಯಥಾರ್ಥ ಕಥೆಯನ್ನು ಹೇಳುತ್ತೇನೆ ಕೇಳು ಎಂದು ಹೇಳಲು ಪ್ರಾರಂಭಿಸಿದರು. ಅದು ಒಂದು ಹಳ್ಳಿ ಊರು. ಆ ಊರಿನ ಹೊರಗೆ ರೋಡಿನ ಪಕ್ಕದಲ್ಲಿ ಒಂದು ಹಸಿಮೆಣಸಿನಕಾಯಿ ತೋಟ ಇತ್ತು. ಅದಕ್ಕೆ ಒಬ್ಬ ಮನುಷ್ಯ ಕಾವಲಾಗಿ ಸಹ ಇದ್ದನು. ಒಂದು ದಿನ ದಾರಿಯಲ್ಲಿ ಹೋಗುವ ಒಬ್ಬ ಸಾಧು ತೋಟದ ಪಕ್ಕದಲ್ಲಿ ಹೋಗುತ್ತಾ ತೋಟದಲ್ಲಿನ ಮೆಣಸಿನ ಕಾಯಿಗಳನ್ನು ನೋಡಿ ಎರಡು

ಮೆಣಸಿನಕಾಯಿಗಳನ್ನು ಕಿತ್ತುಕೊಳ್ಳಬೇಕೆಂದುಕೊಂಡನು. ತಕ್ಷಣವೆ ತೋಟದೊಳಗೆ ಹೋಗಿ ಎರಡೇ ಎರಡು ಮೆಣಸಿನಕಾಯಿಗಳನ್ನು ಕಿತ್ತುಕೊಂಡನು. ಆತನ ಬಳಿ ಅನ್ನ ಮಾತ್ರವಿದೆ, ಸಾರು ಇಲ್ಲ. ಆದ್ದರಿಂದ ಸಾರಿನ ಬದುಲು ಮೆಣಸಿನ ಕಾಯಿಯನ್ನು ಕಡ್ಕೊಂಡು ಅನ್ನ ತಿನ್ನಬಹುದೆಂದುಕೊಂಡನು. ಆತನು ಮೆಣಸಿನಕಾಯಿಗಳನ್ನು ಕೀಳುವುದನ್ನು ತೋಟದ ಕಾವಲುಗಾರ ನೋಡಿದನು. ಕಾವಲುಗಾರ ಅರಚುತ್ತಾ ಅಲ್ಲಿಗೆ ಬಂದನು. ಸಾಧುವನ್ನು ನಾನಾ ದುರ್ಭಾಷೆಗಳಾಡಿ ಮೆಣಸಿನ ಕಾಯಿಗಳನ್ನು ಏಕೆ ಕಿತ್ತಿದ್ದೀಯೆಂದು ಅರಚುತ್ತಾ ಆತನು ಏನು ಹೇಳಿದರು ಕೇಳದಂತೆ, ಕೇವಲ ಎರಡು ಕಾಯಿಗಳೆ ಕಿತ್ತಿರುವುದೆಂದು ಹೇಳಿದರು ಕೇಳದಂತೆ ಸಾಧುವನ್ನು ಚೆನ್ನಾಗಿ ಒದ್ದನು. ಎರಡು ಮೆಣಸಿನ ಕಾಯಿಗಳಿಗೆ ಸಾಧುವನ್ನು ಅಷ್ಟೊಂದು ಒದೆಯುವುದು ನೋಡಿದವರಿಗೆ ಯಾರಿಗಾದರೂ ಅನ್ಯಾಯವೆನಿಸುತ್ತದೆ. ಆದರೆ ಅಲ್ಲಿ ಯಾರೂ ಇಲ್ಲ. ಸಾಧು ಬಾಧೆ ಪಡುತ್ತಾ ತನ್ನ ದಾರಿಯಲ್ಲಿ ತಾನು ಹೋದನು. ಆದರೂ ಆ ವಿಷಯವೆಲ್ಲವನ್ನು, ಒಬ್ಬ ವ್ಯಕ್ತಿ ಗಮನಿಸಿದನು. ಇಬ್ಬರ ಸ್ಥೂಲಶರೀರಗಳ ನಡುವೆ ನಡೆದ ಸಂಘಟನೆಯನ್ನು ಒಬ್ಬ ಸೂಕ್ಷ್ಮ ಶರೀರವಾದ ವ್ಯಕ್ತಿ ನೋಡಿದನು. ಸೂಕ್ಷ್ಮ ಶರೀರ ಅಂದರೆ ಕಾಣಿಸದ ವ್ಯಕ್ತಿ ಎಂದು ಅರ್ಥ. ಕಾಣಿಸದ ವ್ಯಕ್ತಿಗೆ ಆ ಸಂಘಟನೆ ಬಹಳ ಅನ್ಯಾಯವೆನಿಸಿತು. ಆದರೂ ತಾನು ಕಾಣಿಸದ ವ್ಯಕ್ತಿ ಆಗಿರುವುದರಿಂದ ಆಗ ತಾನೇನು ಅನ್ನಲಾರದೆ ಹೋದನು. ಆದರೂ ಆ ತೋಟದ ಕಾವಲುಗಾರನಿಗೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಬೇಕೆಂದುಕೊಂಡನು. ಆ ದಿನ ರಾತ್ರಿಗೆ ಬಂದು ಆ ತೋಟದಲ್ಲಿ ಒಂದು ಸೆಂಟು ಜಾಗದಲ್ಲಿರುವ ಮೆಣಸಿನಕಾಯಿಗಿಡಗಳನ್ನು ಕಿತ್ತು ಕುಪ್ಪೆ ಹಾಕಿ ಹೋದನು. ಬೆಳಗಾದನಂತರ ಆ ತೋಟದ ಕಾವಲುಗಾರನು ಬಂದು ನೋಡಿ ಗೋಳಾಡಿದನು. ನಿನ್ನೆ ಎರಡು ಮೆಣಸಿನಕಾಯಿಗಳಿಗಾಗಿ ಒಬ್ಬ ಸಾಧುವನ್ನು ಒಡೆದಿದ್ದೆನಲ್ಲ ಆತನೆ ಕಕ್ಷೆಯಿಂದ ರಾತ್ರಿಗೆ ಬಂದು ನನ್ನ ಗಿಡಗಳನ್ನು ಕಿತ್ತಿದ್ದಾನೆಂದುಕೊಂಡನು. ಆದರೆ ಸಾಧುವಿಗೆ ಏನು ಗೊತ್ತಿಲ್ಲ. ತನ್ನ ದಾರಿಯಲ್ಲಿ ತಾನು ಅಳುತ್ತಾ ಹೋದನು. ಆ ಸಂಘಟನೆ ನೋಡಿದ ಮೂರನೆ ವ್ಯಕ್ತಿ ಕಿತ್ತು ಹಾಕಿದ್ದಾನೆನ್ನುವ ವಿಷಯ ತೋಟದ

ಮಾಲೀಕನಿಗೆ ತಿಳಿಯದು. ಎರಡನೇ ದಿನ ರಾತ್ರಿ ಸಹ ಒಂದು ಸೆಂಟು ಜಾಗದಲ್ಲಿ ಮೆಣಸಿನಕಾಯಿಗಿಡಗಳನ್ನು ಕಿತ್ತಿರುವುದನ್ನು ತೋಟದ ಮಾಲೀಕ ನೋಡಿದನು. ಈ ಬಾರಿ ಸಾಧುವಿನ ಮೇಲೆ ಬಹಳ ಕೋಪ ಬಂದಿತು. ಮೂರನೆ ದಿನವೂ ಸಹ ಆ ವಿಧವಾಗಿಯೆ ಮಾಡುತ್ತಾನೆಂದು ಊಹಿಸಿದ ತೋಟದ ಮಾಲೀಕ ರಾತ್ರಿಗೆ ಬಂದು ತೋಟದಲ್ಲಿಯೆ ಮಲಗಬೇಕೆಂದುಕೊಂಡನು. ಹಾಗೆಯೇ ರಾತ್ರಿಗೆ ಬಂದು ತೋಟದಲ್ಲಿ ಮಲಗಿಕೊಂಡನು. ರಾತ್ರಿ 12 ಗಂಟೆಗಳವರೆಗು ಎಚ್ಚರದಿಂದಿದ್ದು ನಂತರ ನಿದ್ರೆಹೋದನು. ಬೆಳಗಾದ ನಂತರ ನೋಡಿದನು. ಇನ್ನೇನಿದೆ ಮೂರನೆಯ ದಿನವೂ ಸಹ ಗಿಡಗಳು ಕಿತ್ತು ಬಿದ್ದಿವೆ. ತಾನು ಇಲ್ಲಿಯೇ ಮಲಗಿಕೊಂಡರು ಫಲಿತವಿಲ್ಲದೆ ಹೋಗಿದೆಯೆಂದುಕೊಂಡನು. ಕಿತ್ತಿರುವ ಗಿಡಗಳನ್ನು ನೋಡಿ ಬಹಳ ಬಾಧೆ ಪಟ್ಟನು. ಈ ಬಾರಿ ಸಾಧುವನ್ನು ಹೇಗಾದರೂ ಹಿಡಿದುಕೊಂಡು ಚೆನ್ನಾಗಿ ಒದ್ದು ತನ್ನ ತೋಟದ ಕಡೆಗೆ ಬಾರದಂತೆ ಮಾಡಬೇಕೆಂದುಕೊಂಡನು. ನಾಲ್ಕನೆ ದಿನದ ರಾತ್ರಿ ತೋಟದ ಹತ್ತಿರಕ್ಕೆ ಬಂದು ಕಾವಲಿಗಾಗಿ ಕುಳಿತುಕೊಂಡನು. ಈ ಬಾರಿ ನಿದ್ರೆ ಹೋಗದಂತೆ ಜಾಗ್ರತೆ ಯಿಂದಿದ್ದನು. ರಾತ್ರಿ 12 ಗಂಟೆಗಳು ದಾಟಿತು ಬಿಳಿಯ ವಸ್ತ್ರಗಳನ್ನು ಹಾಕಿಕೊಂಡ ಒಂದು ಆಕಾರ ದೂರದಿಂದ ಬರುವಂತೆ ಕಾಣಿಸಿತು. ತಕ್ಷಣವೆ ತೋಟದ ಮಾಲೀಕ ಜಾಗ್ರತೆಗೊಂಡನು. ಕೈಯಲ್ಲಿ ಕೋಲನ್ನು ತೆಗೆದುಕೊಂಡು ಆ ಕಡೆ ಹೋದನು. ತೋಟದ ಮಾಲೀಕ ತಾನು ಹೋಗುತ್ತಾ ಇರುವಾಗಲೆ ಕಾಣಿಸಿದ ವ್ಯಕ್ತಿ ತೋಟದೊಳಗೆ ಬಂದಿರುವುದು ಗಿಡಗಳನ್ನು ಕಿತ್ತಿರುವುದು ಎಲ್ಲ ನಡೆದುಹೋಗಿವೆ. ಅಲ್ಲಿಗೆ ಹೋಗುವುದರೊಳಗೆ ಗಿಡಗಳು ಕಿತ್ತಿರುವ ವ್ಯಕ್ತಿ ತಿರುಗಿ ಹೋಗಿರುವುದು ನಡೆದಿದೆ. ಈ ಬಾರಿ ತಾನು ನೋಡುತ್ತಾ ಬರುತ್ತಿದ್ದಹಾಗೆ ಇಷ್ಟು ಸ್ಪೀಡಾಗಿ ಕೆಲಸ ನಡೆದಿರುವುದು ತೋಟದ ಮಾಲೀಕನಿಗೆ ಆಶ್ಚರ್ಯವೆನಿಸಿತು. ನಾಲ್ಕನೆ ದಿನವೂ ಸಹ ಸೆಂಟು ಜಾಗದಲ್ಲಿ ಗಿಡಗಳು ಕಿತ್ತಿವೆ. ಯಾರು ಬಂದಿರುವುದೆಂದು ಅರ್ಥವಾಗಲಿಲ್ಲ. ಸಾಧುವಾದರೆ ಅಲ್ಲವೆಂದೆನಿಸಿತು. ದೂರದಿಂದ ನೋಡುತ್ತಿದ್ದಹಾಗೆ ತೋಟದೊಳಗೆ ಬರುವುದು ಹೋಗುವುದು ನಡೆದು ಹೋಗಿದೆಯೆಂದರೆ ಆಶ್ಚರ್ಯವಾಗಿ ಇದೆ. ಈ

ವಿಷಯವನ್ನೆಲ್ಲ ಊರಿನಲ್ಲಿ ಹೇಳಿದನು. ಎಲ್ಲರಿಗೂ ವಿಚಿತ್ರ ಕಥೆಯಂತೆ ಕಾಣಿಸಿತು. ಐದನೆ ದಿನ ಊರಿನಲ್ಲಿನ ಮತ್ತೆ ನಾಲ್ವರು ವ್ಯಕ್ತಿಗಳನ್ನು ಕರೆದುಕೊಂಡು ಕಾವಲಿಗಾಗಿ ಬಂದನು ತೋಟದ ಮಾಲೀಕ. ಐದು ಜನ ಒಂದು ಕಡೆ ಕುಳಿತುಕೊಂಡು ಈ ದಿನ ಜಾಗ್ರತೆಯಿಂದ ನೋಡತೊಡಗಿದರು. ಅವರೆಲ್ಲರೂ ತೋಟದ ಒಂದು ಮೂಲೆಯಲ್ಲಿ ಕುಳಿತುಕೊಂಡಿದ್ದಾರೆ. ಅರ್ಧರಾತ್ರಿ ದಾಟಿತು ಅವರಿಗೆ ಎದುರುಗಡೆ ಮೂಲೆಯಲ್ಲಿ ಒಬ್ಬ ಮನುಷ್ಯ ಬಂದಂತೆ ಕಾಣಿಸಿತು. ತಕ್ಷಣವೇ ಎಲ್ಲರೂ ಕೇಕೆಗಳು ಹಾಕುತ್ತಾ ಆ ಕಡೆ ಹೋದರು. ಆ ಕಡೆ ಹೋಗುವುದರೊಳಗೆ ಬಂದಿರುವ ವ್ಯಕ್ತಿ ಗಿಡಗಳನ್ನು ಕಿತ್ತು ಹೋಗಿರುವುದು ನಡೆದಿದೆ. ದೂರದಿಂದ ಬಿಳಿಯ ಆಕಾರ ಕಾಣಿಸುತ್ತಿದೆ ಆದರೆ ಇಂತವನೆ ಮನುಷ್ಯ ಎಂದು ಯಾರಿಗೂ ಗೊತ್ತಾಗುತ್ತಿಲ್ಲ. ಆ ಕಡೆ ಹೋಗುವುದರೊಳಗೆ ತನ್ನ ಕೆಲಸವನ್ನು ಮುಗಿಸಿಕೊಂಡು ಹೋಗುವುದೆಂದರೆ ಅದು ಮನುಷ್ಯರಿಂದ ಆಗುವ ಕೆಲಸವಲ್ಲವೆಂದು, ಅದು ಯಾವ ದೆವ್ವದ ಕೆಲಸವೊ ಆಗಿರುತ್ತದೆಂದು ಕೆಲವರಿಗೆ ಅನುಮಾನ ಬಂದಿತು. ಮರುದಿನ ಈ ವಿಷಯವೇ ಊರೆಲ್ಲಾ ಚರ್ಚನಿಯಾಂಶವಾಯಿತು. ಯಾವುದೋ ದೆವ್ವವಂತೆ ಮೆಣಸಿನಕಾಯಿ ತೋಟವನ್ನು ಪ್ರತಿ ದಿನ ಕಿತ್ತು ಹಾಕುತ್ತದಂತೆ ಎಂದು ಸ್ವಲ್ಪ ಪ್ರಚಾರವಾದರೆ, ಹಾಗಲ್ಲ ಯಾವ ದೆವ್ವಗಳು ಹಾಗೆ ಮಾಡುವುದಿಲ್ಲ ಇದೇನೊ ಮನುಷ್ಯರ ಕೆಲಸವೆಯೆಂದು ಕೆಲವರು ಅಂದುಕೊಳ್ಳುವುದು ಪ್ರಾರಂಭಿಸಿದರು. ಆರನೆ ದಿನ ಆ ವಿಷಯವನ್ನು ಕುರಿತು ತಿಳಿದುಕೊಳ್ಳಬೇಕೆಂದು ಊರಿನವರಿಗು ಸಹ ಛಲ ಉಂಟಾಯಿತು. ಆ ದಿನ ನಲವತ್ತು ಜನ ಯುವಕರು ಎಲ್ಲರೂ ಜೊತೆಯಾಗಿ ಕೋಲುಗಳನ್ನು ತೆಗೆದುಕೊಂಡು ರಾತ್ರಿಗೆ ತೋಟದಕಡೆಗೆ ಬಂದರು. ನಲವತ್ತು ಜನ ನಾಲ್ಕು ಗುಂಪುಗಳಾಗಿ ನಾಲ್ಕು ಕಡೆಗಳಲ್ಲಿ ಕಾವಲು ಇರುವಂತೆ ಮಾತನಾಡಿಕೊಂಡರು. ಒಂದು ಗುಂಪಿಗೆ ಹತ್ತು ಮಂದಿ ಪ್ರಕಾರ ನಾಲ್ಕು ಕಡೆಗಳಲ್ಲಿ ಸಾವಿರ ಕಣ್ಣುಗಳಿಂದ ನೋಡುತ್ತಿದ್ದಾರೆ. ರಾತ್ರಿ 12 ಗಂಟೆ ಗಳಾಗಿವೆ. ಒಂದು ಗುಂಪಿನಲ್ಲಿ ಚಿಕ್ಕಕಲ್ಲು ಬಿತ್ತು. ಎಲ್ಲಿಯದು ಆ ಕಲ್ಲು ಎಂದು ನೋಡಿಕೊಳ್ಳುವುದರೊಳಗೆ ಮತ್ತೊಂದು ಚಿಕ್ಕ ಕಲ್ಲು ಬಿತ್ತು. ಬಿದ್ದ ಕಲ್ಲುಗಳು ಅಡಿಕೆ ಸೈಜಿಗಿಂತ ದಪ್ಪ ಇಲ್ಲ. ನೀನೇನಾದರೂ ಹಾಕಿದೆಯಾ ನೀನೇನಾದರೂ

ಹಾಕಿದೆಯಾ ಎಂದು ಒಬ್ಬರನ್ನೊಬ್ಬರು ಕೇಳಿಕೊಂಡು ಯಾರೂ ಹಾಕಲಿಲ್ಲವೆಂದು ನಿರ್ಧಾರಿಸಿಕೊಂಡರು. ಆದರೂ ಚಿಕ್ಕಕಲ್ಲುಗಳು ಎಲ್ಲಿಂದ ಬಿದ್ದಿವೆಯೆಂದು ಆಲೋಚಿಸಿದರು. ಅಷ್ಟರಲ್ಲಿ ಅವರಮುಂದೆ ಇದ್ದ ಚಿಕ್ಕಕಲ್ಲು ನೋಡುತ್ತಿದ್ದಹಾಗೆ ಎಗರಿಬಿದ್ದಿತು. ಎಲ್ಲರು ಆಶ್ಚರ್ಯವಾಗಿ ನೋಡುತ್ತಿರುವಾಗ ಒಂದು ಕಲ್ಲಿನ ನಂತರ ಒಂದು ಎಗರುವುದಕ್ಕೆ ಪ್ರಾರಂಭವಾದವು. ಅವುಗಳಿಷ್ಟಕ್ಕವು ಮನುಷ್ಯನ ಎತ್ತರಕ್ಕೆ ಎಗರೆಗರಿ ಬೀಳುತ್ತಿದ್ದ ಆ ಕಲ್ಲುಗಳನ್ನು ನೋಡಿ ಎಲ್ಲರಿಗು ಭಯವಾಯಿತು. ಇದು ಮನುಷ್ಯರು ಮಾಡುವ ಕೆಲಸವಲ್ಲವೆಂದು ಅರ್ಥವಾಯಿತು. ಕಲ್ಲುಗಳು ಬಿದ್ದ ಗುಂಪು ಭಯಪಟ್ಟು ಮತ್ತೊಂದು ಗುಂಪಿನ ಹತ್ತಿರಕ್ಕೆ ಹೋದರು. ಅವರ ಹತ್ತಿರವು ಸಹ ಆ ವಿಧವಾಗಿಯೆ ನಡೆದಂತೆ ಕೇಳಿ ಆಶ್ಚರ್ಯಪಟ್ಟರು. ಎಲ್ಲರೂ ಒಂದು ಕಡೆ ಸೇರಿ ಎಲ್ಲರಿಗು ಹಾಗೆಯೆ ನಡೆದಂತೆ ಹೇಳಿಕೊಂಡರು. ಹೀಗೆ ಎಲ್ಲರು ಭಯಪಡುತ್ತಾ ಒಂದು ಕಡೆ ಗುಂಪುಕೂಡಿ ನೋಡುತ್ತಿದ್ದಹಾಗೆ ತೋಟದಲ್ಲಿ ಒಂದು ಆಕಾರ ಕಾಣಿಸಿತು. ಈ ಸಾರಿ ಯಾರೂ ಆ ಕಡೆ ಹೋಗಲಿಲ್ಲ. ಯಾರಿಗು ಆ ಕಡೆ ಹೋಗುವುದಕ್ಕೆ ಧೈರ್ಯ ಸಾಲಲಿಲ್ಲ. ಪ್ರತಿ ದಿನ ನಡೆದಂತೆ ಆ ದಿನವೂ ನಡೆಯಿತು. ಗಿಡಗಳು ಕಿತ್ತು ಬಿದ್ದಿವೆ. ಆ ಆಕಾರ ಅಲ್ಲಿಂದ ಹೋದಂತೆ ನಿರ್ಧರಿಸಿಕೊಂಡ ನಂತರ ಎಲ್ಲರೂ ತೋಟದೊಳಗೆ ಹೋಗಿ ನೋಡಿ ಗಿಡಗಳು ಆ ದಿನವೂ ಸಹ ಕಿತ್ತು ಬಿದ್ದಿರುವಂತೆ ತಿಳಿದುಕೊಂಡರು. ಎಲ್ಲರು ಇದೇನು ವಿಚಿತ್ರ ಎಂದು ಆಲೋಚನೆ ಮಾಡುತ್ತಿರುವಾಗ ಒಬ್ಬನ ಹೆಗಲಿನ ಮೇಲೆ ಕೈಯಿಂದ ಫಳ್ ಎಂದು ಒಡೆದಂತಾಯಿತು. ಒಡೆದ ಶಬ್ದ ಎಲ್ಲರಿಗು ಕೇಳಿಸಿತು. ಏಟುತಿಂದವನು ಅಬ್ಬಾ ಎಂದು ಜೋರಾಗಿ ಅರಚಿದನು. ಯಾರು ಒಡೆದಿರುವುದೆಂದು ಅರ್ಥವಾಗಲಿಲ್ಲ. ಎಲ್ಲರಿಗು ಭಯವಾಯಿತು. ಅಲ್ಲಿಂದ ಎಲ್ಲರೂ ಊರಿನೊಳಗೆ ಹೋದರು. ಆ ದಿನದಿಂದ ಯಾರು ಆ ತೋಟದ ಕಡೆಗೆ ಹೋಗಲಿಲ್ಲ. ತೋಟದಲ್ಲಿ ಗಿಡಗಳು ಮಾತ್ರ ಪ್ರತಿ ದಿನ ಸ್ವಲ್ಪ ಕಿತ್ತುಬಿದ್ದಿರುತ್ತಿದ್ದವು. ಆ ವಿಧದಲ್ಲಿ ತೋಟದಲ್ಲಿನ ಗಿಡಗಳೆಲ್ಲ ಖಾಲಿಯಾಗಿವೆ. ಎರಡು ಮೆಣಸಿನ ಕಾಯಿಗಳು ಅವು ಸಹ ಅನ್ನದ ಜೊತೆಗೆ ಕಿತ್ತುಕೊಂಡರೆ ಸಾಧುವನ್ನು ಅಷ್ಟೆಲ್ಲಾ ಒಡೆದು ಕೊನೆಗೆ ಏನು ಮಾಡಲಾಗದೆ ತೋಟವೆಲ್ಲವನ್ನು ಕಳೆದುಕೊಂಡನು.

ಪ್ರಪಂಚದಲ್ಲಿ ನಮ್ಮ ಹಾಗೆ ಕಾಣಿಸದಂತೆ ಎಷ್ಟೋ ಇದ್ದಾರೆ. ಅವರಿಗೆ ಅನ್ಯಾಯವೆನಿಸಿದರೆ ಏನಾದರೂ ಮಾಡುತ್ತಾರೆಂದು ಈ ತೋಟದ ವಿಷಯದಲ್ಲಿ ತಿಳಿದುಹೋಯಿತು. ಹಾಗೆ ನೀವು ಕಾಣಿಸದ ವ್ಯಕ್ತಿಗಳಿಗೆ ಸರಿಹೋಗದ ಕೆಲಸಗಳು ಮಾಡಿದ್ದೀರ. ಕಾರಿಗೆ ಗೇಟ್ ಇಟ್ಟು ಒಂದು ತಪ್ಪು ಮಾಡಿದ್ದೀರ. ನಂತರ ಕೋಳಿಗಳನ್ನು ಬಿಡದೆ ನಾಯಿಗಳ ಕೋನ ದಾಟಿದ್ದೀರ. ಆ ನಂತರ ಈಶ್ವರಾಲಯ ದಲ್ಲಿ ಪೂಜೆಗಳು ಮಾಡದಂತೆ ಬಂದಿದ್ದೀರ. ಈ ವಿಷಯದಮೇಲೆ ನಿಮಗೆ ನೆನಪಿಲ್ಲ. ನಿಮಗೆ ತಿಳಿಯದೆ ಒಂದು ಮಹತ್ತರ ಕಾರ್ಯಕ್ಕೆ ಅಡಚಣೆ ಕಲ್ಪಿಸಿದ್ದೀರ. ಯಾರೂ ಹೋಗದ ಸಮಯದಲ್ಲಿ ಅಡವಿಯೊಳಗೆ ಹೋಗಿದ್ದೀರ. ನಿಮಗೆ ಕಾಣಿಸುವ ಲೋಕ ಹೊರತು ಕಾಣಿಸದ ಲೋಕ ತಿಳಿದಿಲ್ಲ. ಆದ್ದರಿಂದ ನೀವು ಹಾಗೆ ಮಾಡಿದ್ದೀರ. ನಿಮ್ಮ ಕೆಲಸಗಳಿಂದ ಕೆಲವು ಜನರಿಗೆ ಕೋಪ ಬಂದಿದೆ. ಆ ಕೋಪದ ಒಂದು ಫಲಿತವೇ ಎಸ್.ಪಿ ಯವರಿಗೆ ಹೊಟ್ಟೆನೋವು ಬಂದಿದೆ. ನೀವು ಮಾಡಿದ ತಪ್ಪುಗಳಿಗೆ ನಿಮ್ಮ ಪರವಾಗಿ ಎಷ್ಟೋ ವಿವರಣೆ ನಾನು ಹೇಳಿದ್ದೇನೆ ಎಂದರು ಸ್ವಾಮಿಯವರು ಅದೆಲ್ಲವೂ ಕೇಳಿದ ಡಿ.ಎಸ್.ಪಿ ಯವರಿಗೆ ಏನೂ ಅರ್ಥವಾಗಲಿಲ್ಲ. ಯಾವ ಕಾರ್ಯಕ್ಕೆ ಅಡಚಣೆಯು ತಮ್ಮಿಂದ ಆಗಿದೆಯೊ ತಿಳಿದುಕೊಳ್ಳಬೇಕೆಂದುಕೊಂಡನು.

**ಡಿ.ಎಸ್.ಪಿ :** ಸ್ವಾಮಿ ನಮಗೆ ತಿಳಿಯದಂತೆ ನಾವು ಯಾವ ಕಾರ್ಯಕ್ಕೆ ಅಡಚಣೆಯನ್ನು ಕಲ್ಪಿಸಿದ್ದೇವೆ?

**ಸ್ವಾಮಿ :** ಅದು ನಾನು ಹೇಳಿದರು ನಿಮಗೆ ಅರ್ಥವಾಗದು. ಆದರೂ ಹೇಳದೆ ತಪ್ಪುವುದಿಲ್ಲ. ಬರುವ ಅಮಾವಾಸ್ಯೆ ದಿನ ಭೂಮಿ ಮೇಲೆ ದೊಡ್ಡ ಭೂಕಂಪ ನಡೆಯಲಿದೆ. ಆಕಾಶದಿಂದ ಕಾಣಿಸದ ಒಂದು ಗ್ರಹ ಭೂಮಿಮೇಲೆ ಬರಲಿದೆ. ಆ ಗ್ರಹ ಭೂಮಿ ಮೇಲೆ ದೊಡ್ಡ ಭೂಕಂಪವನ್ನು ಕಲ್ಪಿಸಿ ಅನೇಕ ಜನರ ಪ್ರಾಣಗಳನ್ನು ನಾಶಮಾಡಬಲ್ಲದು. ಭೂಕಂಪ ಹೊಲಗಳಲ್ಲಿ ಆಗಬಾರದು. ದೊಡ್ಡ ಪಟ್ಟಣದಲ್ಲಿ ನಡೆಯಬೇಕಾಗಿದೆ. ಅದು ಯಾವ ಪಟ್ಟಣದಲ್ಲಿ ನಡೆಯಬೇಕೆಂದು ಚರ್ಚಿಸುವುದಕ್ಕೆ ಭೂಮಿ ಮೇಲಿರುವ ಚಿಕ್ಕ ಚಿಕ್ಕ ಗ್ರಹಗಳೆಲ್ಲವು

ಒಂದು ಕಡೆ ಸೇರಿ ಚರ್ಚಿಸಬೇಕಾಗಿದೆ. ಆ ಚರ್ಚೆ ಅಡವಿಯಲ್ಲಿ ಶಿವಾಲಯದ ಬಳಿ ನಡೆಯುವುದಕ್ಕೆ ನಿರ್ಣಯಿಸಿಕೊಂಡಿದ್ದಾರೆ. ಆ ಕೆಲಸದ ಸಲುವಾಗಿ ಕೆಲವು ಸೂಕ್ಷ್ಮ ಗ್ರಹಗಳು ಅಲ್ಲಿ ಸೇರುವುದಕ್ಕೆ ಮೂರು ತಿಂಗಳು ಕಾರು ಅಡವಿಯೊಳಗೆ ಹೋಗಿ ಬಂದಿದೆ. ಹೊರಗಡೆ ಖಾಲಿ ಕಾರು ಅಡವಿಯೊಳಗೆ ಹೋಗಿ ಬಂದಂತೆ ಕಾಣಿಸಿದರೂ ಅದರಲ್ಲಿ ಮುಖ್ಯವಾದ ಗ್ರಹಗಳು ಇವೆ. ನಂತರ ನಾಲ್ಕನೆ ತಿಂಗಳಲ್ಲಿ ಹೆಚ್ಚಿನ ಜನ ಅಲ್ಲಿ ಸೇರಬೇಕಾಗಿದೆಯಾದ್ದರಿಂದ ನೇರವಾಗಿ ಬಸ್ಸು ಒಳಗೆ ಹೋಗಬೇಕಾಯಿತು. ಬಸ್ಸು ಖಾಲಿಯಾಗಿ ಕಾಣಿಸಿದರೂ ಅದರಲ್ಲಿ ಹೆಚ್ಚಿನ ಜನ ಗ್ರಹಗಳಿದ್ದಾರೆಂದು ಯಾರಿಗೂ ತಿಳಿದಿಲ್ಲ. ಈ ಗ್ರಹಗಳ ಸಮಾವೇಶ ಫಲಿತವಾಗಿ ಬರುವ ಭೂಕಂಪ ಈ ದೇಶದಿಂದಲೆ ಬದಲಾವಣೆ ಯಾಗಿದೆ. ನಡೆಯುವ ಭೂಕಂಪ ಈ ದೇಶದಲ್ಲಿ ನಡೆಯದೆ ಹೋಗುವುದಕ್ಕೆ ಕಾರಣ ಎಷ್ಟೋ ಗ್ರಹಗಳ ಚರ್ಚೆಗಳ ಕೃಷಿ ಎಂದೆ ತಿಳಿಯುತ್ತಿದೆ. ಒಂದು ಭಯಂಕರ ಭೂಕಂಪವನ್ನು ನಿವಾರಿಸುವುದಕ್ಕೆ ನಡೆಯಬಹುದಾದ ಸಮಾವೇಶಕ್ಕೆ ಹೋಗುವವರಿಗೆ ಅಡಚಣೆಯನ್ನು ಕಲ್ಪಿಸಿದ್ದೀರ ಆದ್ದರಿಂದ ಅದರ ಫಲಿತವಾಗಿಯೆ ನಿಮ್ಮ ಚೆಕ್‌ಪೋಸ್ಟಿನಲ್ಲಿ ಭಯಾನಕ ವಾತಾವರಣ ನೆಲೆಗೊಂಡಿದೆ. ನೀವು ಚೆಕ್‌ಪೋಸ್ಟ್ ತೆಗೆದು ಹಾಕಬೇಕಾಗಿದೆ. ಚೆಕ್‌ಪೋಸ್ಟ್ ತೆಗೆದು ಹಾಕುವುದೇ ಅಲ್ಲದೆ ಬರುವ ಶಿವರಾತ್ರಿಗೆ ನಾಯಿಗಳ ಕೋನದಲ್ಲಿ ಭೈರವನಿಗೆ ಪೂಜೆಗಳು ಮಾಡಿಸಿ ಅಲ್ಲಿ ಕೋಳಿಗಳನ್ನು ಬಿಡಬೇಕಾಗುತ್ತದೆ. ಅಷ್ಟೇ ಅಲ್ಲದೆ ಈಶ್ವರಾಲಯಕ್ಕೆ 108 ಪ್ರದಕ್ಷಿಣೆಗಳನ್ನು ಮಾಡಬೇಕಾಗಿರುತ್ತದೆ.

ಆ ದಿನ ಅಡವಿಯೊಳಗೆ ಯಾರ‍್ಯಾರು ಹೋಗಿದ್ದಾರೋ ಅವರೆಲ್ಲರೂ ಪ್ರದಕ್ಷಿಣೆಗಳು ಮಾಡುವುದು ತಪ್ಪುವುದಿಲ್ಲ. ನಾಯಿಗಳ ಕೋನದಲ್ಲಿ ಪೂಜೆ ಮಾಡದೆ ತಪ್ಪುವುದಿಲ್ಲ. ಹಾಗೆ ಮಾಡದಿದ್ದಲ್ಲಿ ನಂತರದ ಅಮಾವಾಸ್ಯೆಯಿಂದ ಗುಣವಾಗದ ರೋಗಗಳು ಎಲ್ಲರಿಗು ಅಂಟಿಕೊಳ್ಳಬಹುದು. ಅವುಗಳನ್ನು ಯಾರೂ ಗುಣಪಡಿಸಲಾರರು. ಇದೆಲ್ಲವೂ ನಂಬಲಾರದ ವಿಷಯವಾಗಿ ನಿಮಗೆ ಕಾಣಿಸಿದರೂ ನಾನು ಹೇಳುವುದು ಸತ್ಯ. ಭೂಕಂಪಕ್ಕೆ ಗ್ರಹಗಳಿಗೆ ಏನು ಸಂಬಂಧ ಎಂದು ನೀನಂದುಕೊಳ್ಳಬಹುದು. ಒಂದು ಭೂಕಂಪಕ್ಕೆ ಅಲ್ಲ ಎಲ್ಲಾದರೆ

ಸಾಮೂಹಿಕವಾಗಿ ಪ್ರಜೆಗಳು ಸಾಯುವ ಸಂಘಟನೆಗಳು ನಡೆಯುತ್ತಿವೆಯೊ ಅಲ್ಲಿಯೆಲ್ಲವೂ ಗ್ರಹಗಳ ಹಸ್ತವಿರುತ್ತದೆ.

**ಡಿ.ಎಸ್.ಪಿ :** ಭೂಕಂಪವನ್ನು ನಿವಾರಿಸಲಾರೆವಾ ಸ್ವಾಮಿ.

**ಸ್ವಾಮಿ :** ಯಾರೂ ನಿವಾರಿಸಲಾರರು. ಅದು ತಪ್ಪದೆ ನಡೆದು ತೀರುತ್ತದೆ. ಆದರೆ ಇಂತಹ ಜಾಗದಲ್ಲೆಂದು ಮೊದಲೇ ಹೇಳುವುದಕ್ಕೆ ಅವಕಾಶವಿಲ್ಲ.

**ಡಿ.ಎಸ್.ಪಿ :** ಗ್ರಹಗಳು ವಾಹನಗಳಲ್ಲಿ ಪ್ರಯಾಣಿಸುತ್ತವಾ?

**ಸ್ವಾಮಿ :** ಹೌದು ಹಾಗೆ ನಡೆಯುತ್ತಿದೆ. ವಾಹನ ತಿರುಗಾಡುವ ಜಾಗಗಳಲ್ಲಿ ಹತ್ತು ಜನ ಮನುಷ್ಯರಲ್ಲಿ ಒಂದು ಗ್ರಹವಾದರೂ ಪ್ರಯಾಣಿಸುತ್ತಿರುತ್ತದೆ. ಅದು ಯಾರಿಗೂ ತಿಳಿದಿಲ್ಲ. ಅಡವಿಯೊಳಗೆ ಹೋಗುವ ವಾಹನಗಳು ಇಲ್ಲವಾದ್ದರಿಂದ ಪ್ರತ್ಯೇಕವಾಗಿ ವಾಹನಗಳಲ್ಲಿ ಅವು ಹೋಗಬೇಕಾಯಿತು. ಚೆಕ್‌ಪೋಸ್ಟ್ ಇರುವುದರಿಂದ ಖಾಲಿವಾಹನ ಹೋದಂತೆ ಗುರ್ತಿಸಿದ್ದೀರ. ಇಲ್ಲವಾದರೆ ತಿಳಿಯುತ್ತಿರಲಿಲ್ಲ.

**ಡಿ.ಎಸ್.ಪಿ :** ಪ್ರತಿ ದಿನ ರಾತ್ರಿಹೊತ್ತು ಚೆಕ್‌ಪೋಸ್ಟಿನಲ್ಲಿ ಒಬ್ಬ ಮನುಷ್ಯ ಕಾಡಿನೊಳಗೆ ಹೋದಂತೆ ಕಾಣಿಸುತ್ತದೆ. ಹೋಗುವುದು ಮಾತ್ರ ಕಾಣಿಸುತ್ತದೆ, ಬರುವುದು ಒಂದು ದಿನವೂ ನೋಡಲಿಲ್ಲ. ಇದು ಏನಾಗಿರುತ್ತದೆ? ಸ್ವಲ್ಪ ವಿವರವಾಗಿ ಹೇಳಿರಿ ಸ್ವಾಮಿ!

**ಸ್ವಾಮಿ :** ಪ್ರತಿ ದಿನ ಕಾಡಿನೊಳಗೆ ಮನುಷ್ಯ ಬರುವುದು ನಡೆಯುತ್ತಿದೆ, ಹಾಗೇ ಹೋಗುವುದು ನಡೆಯುತ್ತಿದೆ. ಹೋಗುವುದು ರಾತ್ರಿಹೊತ್ತು ನಡೆಯುತ್ತಿದೆ ಆದ್ದರಿಂದ ನೀವು ನೋಡುತ್ತಿದ್ದೀರ. ಬರುವುದು ಹಗಲು ಹೊತ್ತಿನಲ್ಲಿ ನಡೆಯುತ್ತಿದೆ ಆದ್ದರಿಂದ ಯಾರೂ ನೋಡಲಾಗದೆ ಹೋಗುತ್ತಿದ್ದಾರೆ. ಹಗಲು ಹೊತ್ತಿನಲ್ಲಿ ಸೂಕ್ಷ್ಮ ಶರೀರ ಕಾಣಿಸದು ಕಾಡಿನೊಳಗೆ ಪ್ರತಿ ದಿನ ರಾತ್ರಿ ಹೊತ್ತು ಹೋಗುವುದು ಸೂಕ್ಷ್ಮ ಶರೀರವಾದ್ದರಿಂದ ಅದು ಮಸುಗು ಮಸುಗು ಕತ್ತಲಲ್ಲಿ ಕಾಣಿಸುತ್ತದೆ. ಹಗಲು ಹೊತ್ತು ಯಾರಿಗೂ ಕಾಣಿಸದಂತೆ ಬಂದ ಸೂಕ್ಷ್ಮ ಶರೀರ ನೇರವಾಗಿ ಎಸ್.ಪಿ ಯವರ ಬಳಿಗೆ ಹೋಗುತ್ತಿದೆ. ಸಮಯ ನೋಡಿ ಸಾಯಂಕಾಲದ

ಹೊತ್ತು ಡಿ.ಎಸ್.ಪಿ ಯವರ ಶರೀರದೊಳಗೆ ಪ್ರವೇಶಿಸಿ ಹೊಟ್ಟೆಯಲ್ಲಿ ನೋವನ್ನು ಉಂಟುಮಾಡುತ್ತಿದೆ. ಆ ಕೆಲಸ ಮುಗಿದ ನಂತರ ಮತ್ತೆ ರಾತ್ರಿ ಹೊತ್ತು ಕಾಡಿನೊಳಗೆ ಹೋಗುತ್ತಿದೆ. ಹಾಗೆ ಪ್ರತಿ ದಿನ ಹೋಗುವುದಕ್ಕೆ ಒಂದು ಕಾರಣವಿದೆ. ಅದೇನೆಂದರೆ! ಕಾಡಿನ ಮೊದಲನೆ ಭಾಗದಲ್ಲಿ ಫರ್ಲಾಂಗ್ ದೂರದಲ್ಲಿಯೇ ಒಂದು ದೊಡ್ಡ ಹುತ್ತವಿದೆ. ಆ ಹುತ್ತದಲ್ಲಿ ಬಹಳ ಕಾಲದಿಂದ ಒಂದು ದೊಡ್ಡ ಸರ್ಪವಿದೆ. ಹುತ್ತಕ್ಕೆ ಎದುರುಗಡೆ ನೂರು ಅಡಿಗಳ ದೂರದಲ್ಲಿ ಒಂದು ಆಲದಮರವಿದೆ. ಆ ಆಲದಮರದ ಮೇಲೆ ಒಬ್ಬ ಮನುಷ್ಯ ಸೂಕ್ಷ್ಮ ಶರೀರದಿಂದ ನಿವಾಸಿಸುತ್ತಿದ್ದಾನೆ. ಆ ಮನುಷ್ಯ ಎದುರಿಗಿರುವ ಹುತ್ತದೊಳಗಿನ ಹಾವಿಗೆ ಕಾವಲುಗಾರನಾಗಿದ್ದಾನೆ. ಕಾಡಿನ ಮೊದಲ ಭಾಗವಾಗಿರುವುದರಿಂದ ಯಾರಾದರೂ ಮನುಷ್ಯರು ಅಲ್ಲಿಗೆ ಬರುವ ಅವಕಾಶವಿದೆ. ಹಾಗೇ ಯಾರಾದರೂ ಬಂದರೆ ಅವರಿಂದ ಆ ಹಾವಿಗೆ ಯಾವ ಮುಪ್ಪು ಇಲ್ಲದಂತೆ ಕಾವಲು ಕಾಯುತ್ತಿದ್ದನು. ಹುತ್ತದೊಳಗಿನ ಹಾವು ಸಾಮಾನ್ಯ ಹಾವು ಅಲ್ಲ. ಅದರ ತಲೆಯಲ್ಲಿ ಮಣಿಯಿದ್ದು ಎಷ್ಟೋ ಪ್ರತ್ಯೇಕತೆ ಹೊಂದಿದೆ.

ಒಂದು ದಿನ ಅಲ್ಲಿಗೆ ಹತ್ತಿರದಲ್ಲಿದ್ದ ಪಾಮುಲಗೂಡೆಮು ಎನ್ನುವ ಊರಿನ ಹಸುಗಳು ಕೆಲವು ಕಾಡಿನ ಮೊದಲ ಭಾಗವಾದ ಹುತ್ತದ ಸಮೀಪಕ್ಕೆ ಬಂದವು. ಅವುಗಳನ್ನು ಹುಡುಕುತ್ತಾ ಹಸುಗಳ ಕಾವಲುಗಾರ ಬಂದನು. ಹಸುಗಳು ಹುತ್ತದ ಸಮೀಪದಲ್ಲಿ ಮಲಗಿಕೊಂಡಿವೆ. ಹಸುಗಳ ಕಾವಲುಗಾರ ಹಸುಗಳಿಗಾಗಿ ಹುತ್ತದ ಸಮೀಪಕ್ಕೆ ಬಂದನು. ಇದೆಲ್ಲವೂ ಹುತ್ತಕ್ಕೆ ಎದುರಿಗಿರುವ ಆಲದ ಮರದ ಮೇಲಿನಿಂದ ಸೂಕ್ಷ್ಮ ಶರೀರ ನೋಡುತ್ತಲೆ ಇದೆ. ಅಲ್ಲಿಗೆ ಬಂದ ಪಶುಗಳ ಕಾವಲುಗಾರನನ್ನು ನೋಡಿ ಮಲಗಿದ್ದ ಹಸುಗಳು ಎದ್ದು ನಿಂತವು. ಎದ್ದಿರುವ ಹಸುಗಳು ಮೂತ್ರ ಮಾಡಲು ಪ್ರಾರಂಭಿಸಿದವು. ಅವುಗಳನ್ನು ನೋಡಿದ ಹಸುಗಳ ಕಾವಲುಗಾರನಿಗು ಸಹ ಮೂತ್ರ ಬಂದಿದೆ. ಅವನು ಅಲ್ಲಿ ಹುತ್ತದ ಕಡೆ ತಿರುಗಿ ನಿಂತುಕೊಂಡು ಹುತ್ತದ ಮೇಲೆ ಮೂತ್ರ ಬೀಳುವಂತೆ ಮೂತ್ರ ವಿಸರ್ಜನೆ ಮಾಡಿದನು. ಮೂತ್ರ ಒಯ್ದಾಗ ಹುತ್ತದ ಮೇಲೆ ಸಹ

ಸ್ವಲ್ಪ ಮೂತ್ರ ಬಿದ್ದಿದೆ. ಅದನ್ನು ಗಮನಿಸಿದ ಸೂಕ್ಷ್ಮ ಶರೀರಕ್ಕೆ ಕೋಪ ಬಂದಿತು. ತಕ್ಷಣವೆ ಮರ ಇಳಿದು ಬಂದನು. ತನ್ನ ಕೋಪವನ್ನು ಸಹಿಸಿಕೊಳ್ಳದೆ ಹೋದನು. ಅಷ್ಟರಲ್ಲಿಯೆ ಮೂತ್ರ ಒಯ್ದು ಶಬ್ದಕ್ಕೆ ಹಾವು ಹೊರಗೆ ಬಂದಿತು. ಕಾವಲುಗಾರ ಹಾವನ್ನು ನೋಡಲಿಲ್ಲ. ತನ್ನ ಕೆಲಸದಲ್ಲಿ ತಾನು ಮಗ್ನವಾಗಿ ಹಸುಗಳನ್ನು ಒಡೆಯಲಾರಂಭಿಸಿದನು. ಸೂಕ್ಷ್ಮ ಶರೀರ ಹಾವಿನ ಶರೀರದೊಳಗೆ ಪ್ರವೇಶಿಸಿತು. ಸೂಕ್ಷ್ಮ ಶರೀರ ಸೇರಿದ ಹಾವು ಹಸುಗಳ ಕಾವಲುಗಾರನ ಕಡೆಗೆ ಕೋಪದಿಂದ ಬಂದಿತು. ಅದನ್ನು ನೋಡಿದ ಕಾವಲುಗಾರ ಓಡಿಹೋಗಬೇಕೆಂದು ನೋಡಿದನು. ಹತ್ತಿರವಿದ್ದ ಹಸುವನ್ನು ಏರಿ ಆ ಹಸುವನ್ನು ಓಡಿಹೋಗುವಂತೆ ಮಾಡಿ ಹಾವಿನ ಬಾಯಿಂದ ತಪ್ಪಿಸಿಕೊಂಡನು. ಸೂಕ್ಷ್ಮ ಶರೀರಕ್ಕೆ ಕೋಪ ನಿಲ್ಲಲಿಲ್ಲ. ಹೇಗಾದರೂ ಅವನನ್ನು ಸಾಯಿಸಬೇಕೆಂದುಕೊಂಡನು. ಹಾವನ್ನು ಬಿಟ್ಟು ಸೂಕ್ಷ್ಮ ಶರೀರದಿಂದ ಪಾಮುಲಗೂಡೆಮು ಊರಿಗೆ ಹಸುಗಳ ಕಾವಲುಗಾರನನ್ನು ಹುಡುಕುತ್ತಾ ಬಂದನು. ಕಾವಲುಗಾರನ ವಿಳಾಸವನ್ನು ತಿಳಿದುಕೊಂಡನು. ಅಷ್ಟರಲ್ಲಿಯೇ ಕಾವಲುಗಾರ ಒಬ್ಬ ಗ್ರಾಮ ದೇವತೆ ಹತ್ತಿರಕ್ಕೆ ಹೋಗಿ ಹಾವು ನನ್ನ ಹತ್ತಿರಕ್ಕೆ ಬಾರದಂತೆ ನೋಡೆಂದು ಕೈ ಮುಗಿದುಕೊಂಡನು. ಗ್ರಾಮದೇವತೆ ಒಬ್ಬ ಮನುಷ್ಯನೊಳಗೆ ಆವೇಶವಾಗಿ ಬಂದು ಹುತ್ತದ ಮೇಲೆ ಮೂತ್ರ ಮಾಡಿರುವುದರಿಂದಲೆ ನಿನಗೆ ಮುಪ್ಪು ಬಂದಿದೆಯೆಂದು ಹೇಳಿತು. ಹುತ್ತದಲ್ಲಿ ಪವಿತ್ರ ಸರ್ಪವಿದೆಯೆಂದು ಅಲ್ಲಿ ಮೂತ್ರ ಮಾಡಿರುವುದರಿಂದ ನಿನಗೆ ಮೂರು ದಿನಗಳು ಪ್ರಾಣಾಪಾಯವಿದೆಯೆಂದು ಮೂರು ದಿನಗಳು ಕಳೆದರೆ ಪರವಾಗಿಲ್ಲ ವೆಂದು ಹೇಳಿತು. ಹಸುಗಳ ಕಾವಲುಗಾರನನ್ನು ಹುಡುಕುತ್ತಾ ಹೋದ ಸೂಕ್ಷ್ಮ ಶರೀರ ಊರಿನಲ್ಲಿ ಒಂದು ಹಾವಿನಲ್ಲಿ ಸೇರಿ ಕಾವಲುಗಾರನನ್ನು ಕಚ್ಚಲು ಹೋದಾಗ ಸ್ವಲ್ಪ ಅಂತರದಲ್ಲಿ ಕಾವಲುಗಾರ ತಪ್ಪಿಸಿಕೊಂಡನು. ಆದರೂ ಮೂರು ದಿನಗಳೊಳಗೆ ಹಾವಿನಲ್ಲಿ ಪ್ರವೇಶಿಸಿದ ಸೂಕ್ಷ್ಮ ಶರೀರ ಕಚ್ಚುವುದು ಆತನು ಸಾಯುವುದು ನಡೆದುಹೋಯಿತು. ಈ ತತಂಗವೆಲ್ಲವೂ ಊರಿನವರಿಗೆಲ್ಲ ತಿಳಿದುಹೋಗಿರುವುದರಿಂದ ಕಾಡಿನೊಳಗಾಗಲಿ, ಹುತ್ತದ ಹತ್ತಿರಕ್ಕಾಗಲಿ ಯಾರೂ ಹೋಗದೆ ಇದ್ದರು.

ಹುತ್ತದ ಹತ್ತಿರವೆ ಮರದ ಮೇಲಿರುವ ಸೂಕ್ಷ್ಮ ಶರೀರ ಯಾರನ್ನು ಅಲ್ಲಿಗೆ ಬಾರದಂತೆ ನೋಡಿಕೊಳ್ಳುತ್ತಿತ್ತು. ಪ್ರತಿ ದಿನ ರಾತ್ರಿ ಹೊತ್ತು ಹಾವು ಹುತ್ತದಿಂದ ಹೊರಗೆ ಬಂದು ತನ್ನ ಬಾಯೊಳಗಿನ ಮಣಿಯನ್ನು ತೆಗೆದು ಹೊರಗೆ ಇಡುತ್ತಿತ್ತು. ಆ ಮಣಿ ದೀಪದಂತೆ ಕತ್ತಲಲ್ಲಿ ಬೆಳಗುತ್ತದೆ. ಅದು ದೀಪವೆಂದು ಭ್ರಮಿಸಿ ಅಲ್ಲಿಗೆ ಬಂದ ಕಪ್ಪೆಗಳನ್ನು ಚಿಕ್ಕ ಚಿಕ್ಕ ಹುಳಗಳನ್ನು ಹಾವು ತಿಂದು ಹೊಟ್ಟೆ ತುಂಬಿಸಿಕೊಳ್ಳುತ್ತಿತ್ತು. ಈ ವಿಧದಲ್ಲಿ ಒಂದು ಗಂಟೆಕಾಲ ಆಹಾರ ತೆಗೆದುಕೊಳ್ಳುವವರೆಗು ಆ ಮಣಿ ಯಾರ ಕಣ್ಣಿಗೆ ಬೀಳದಂತೆ ಸೂಕ್ಷ್ಮ ಶರೀರ ಕಾವಲು ಕಾಯುತ್ತಿತ್ತು. ನಂತರ ಆ ಮಣಿಯನ್ನು ಹಾವು ಬಾಯಿನಲ್ಲಿ ಇಟ್ಟುಕೊಳ್ಳುತ್ತಿತ್ತು, ಆ ಕ್ಷಣವೆ ಹಾವಿನೊಳಗೆ ಸೂಕ್ಷ್ಮ ಶರೀರ ಪ್ರವೇಶಿಸಿ ದೆವ್ವಗಳ ಕೋನ (ನಾಯಿಗಳ ಕೋನದ) ಕಡೆಗೆ ಹೋಗುತ್ತಿತ್ತು. ಹಾವು ದೆವ್ವಗಳ ಕೋನದಲ್ಲಿನ ಭೈರವನ ಗುಡಿ ಹತ್ತಿರಕ್ಕೆ ಹೋಗಿ ಅಲ್ಲಿ ಭೈರವನ ಪ್ರತಿಮೆ ಮುಂದೆ ಮಣಿಯನ್ನಿಟ್ಟು ಅಲ್ಲಿಯೇ ಕಾದುಕೊಂಡಿರುತ್ತಿತ್ತು. ಕಾಡಿನ ಮಧ್ಯೆಭಾಗದಲ್ಲಿರುವ ಈಶ್ವರ ದೇವಾಲಯದಲ್ಲಿ ಸಹ ಒಂದು ದೊಡ್ಡ ಸರ್ಪವಿರುತ್ತಿತ್ತು. ಅದು ಸಹ ಮಣಿಯಿರುವ ಸರ್ಪವೆ. ಆ ಸರ್ಪವು ಸಹ ಸರಿಯಾಗಿ ಅರ್ಧರಾತ್ರಿ ಸಮಯಕ್ಕೆ ನಾಯಿಗಳ ಕೋನಕ್ಕೆ ಬಂದು ತನ್ನ ಮಣಿಯನ್ನು ಭೈರವನ ಪಾದಗಳ ಬಳಿ ಇಟ್ಟು ಅಲ್ಲಿಯೆ ಕಾದುಕೊಂಡಿದ್ದ ಸರ್ಪದ ಬಳಿಗೆ ಹೋಗುತ್ತಿತ್ತು. ಎರಡು ಹಾವುಗಳು ಒಂದು ಗಂಟೆ ಹೊತ್ತು ಕಲೆತಿರುತ್ತಿದ್ದವು. ಆ ಸಮಯದಲ್ಲಿ ಯಾವ ಮುಂಗೂಸಿಯಾಗಲಿ, ಯಾವ ಬೆಕ್ಕಾಗಲಿ, ಯಾವ ಜಂತುವಾಗಲಿ ಆ ಕಡೆ ಬಾರದಂತೆ ಗುಡಿಸುತ್ತಲೂ ನಾಯಿಗಳು ಕಾವಲಿರುತ್ತಿದ್ದವು. ಇದೆಲ್ಲವೂ ಯಾರೂ ಹೇಳದೆ ಕ್ರಮ ತಪ್ಪದೆ ನಡೆಯುತ್ತಿತ್ತು. ದೇಶದಲ್ಲಿ ಏನಾದರೂ ದೊಡ್ಡ ವಿಪತ್ತು ನಡೆಯುವ ಮೊದಲು ಎಷ್ಟೋ ಜನ ದೇವತೆಗಳು ಭೈರವನ ಗುಡಿಮುಂದಕ್ಕೆ ಬರುತ್ತಾರೆಂದು, ಆಗ ಭೈರವನು ಹೊರಗೆ ಬರುತ್ತಾನೆಂದು, ಭೈರವನು ಬರುವ ಸಮಯಕ್ಕೆ ಮಣಿಗಳನ್ನು ಆತನ ಪಾದಗಳ ಬಳಿ ಇಟ್ಟು ದ್ವಾರಪಾಲಕರಂತೆ ಎರಡು ಹಾವುಗಳಿರುವುದು, ಹೊರಗೆ ನಾಯಿಗಳು ಕಾವಲಿರುವುದು ಅಲ್ಲಿ ಸಂಪ್ರದಾಯವಾಗಿ ಹೋಗಿದೆ. ಅರ್ಧ ರಾತ್ರಿ ಸಮಯದಲ್ಲಿ

ಅಲ್ಲಿ ಹಾವುಗಳು ಇಲ್ಲದೆ ಹೋಗುವುದಾಗಲಿ, ನಾಯಿಗಳು ಇಲ್ಲದಂತೆ ಹೋಗುವುದಾಗಲಿ ನಡೆಯುವುದಿಲ್ಲ. ಒಂದು ಶಿವರಾತ್ರಿ ಸಮಯದಲ್ಲಿ ಏಳು ದಿನಗಳು ಅಲ್ಲಿ ಏನು ಇರುವುದಿಲ್ಲ. ದೀಪವಿಲ್ಲದ ಭೈರವನ ಗುಡಿ ಅರ್ಧರಾತ್ರಿ ಸಮಯದಲ್ಲಿ ಮಣಿಗಳ ಪ್ರಕಾಶದಿಂದ ಬೆಳಗುತ್ತಿರುತ್ತದೆ. ಪ್ರತಿ ದಿನ ಹಾವುಗಳು ಎರಡು ಹೋಗುವಾಗ 30 ಮೈಲುಗಳು, ಬರುವಾಗ 30 ಮೈಲುಗಳು ಪ್ರಯಾಣಿಸುತ್ತಿದ್ದವು. ಹಾವಿನಲ್ಲಿ ಸೇರಿ ಪ್ರಯಾಣಿಸಿದ ಸೂಕ್ಷ್ಮ ಶರೀರ ಹಗಲೆಲ್ಲ ಆಲದಮರದ ಮೇಲೆ ಇರುತ್ತಿತ್ತು.

ನೀವು ಅಕಾಲದಲ್ಲಿ ಅಡವಿಯೊಳಗೆ ಹೋಗಿದ್ದೀರ ಆದ್ದರಿಂದ ಭೈರವನಿಗೆ ಕೋಪ ಬಂದಿದೆ. ಭೈರವನ ಆಜ್ಞೆಯಿಂದಲೇ ಸರ್ಪರೂಪದಂತೆ ಬದಲಾಗುತ್ತ ಸರ್ಪದಲ್ಲಿ ಸೇರುತ್ತಿದ್ದ ಸೂಕ್ಷ್ಮ ಗ್ರಹ ಹಗಲು ಆಲದಮರವನ್ನು ಬಿಟ್ಟು ಕಾಡಿನ ಹೊರಗೆ ಬರುತ್ತದೆ. ಹಗಲಿನ ಹೊತ್ತು ಮನುಷ್ಯ ಸೂಕ್ಷ್ಮವಾಗಿಯೇ ಬರುತ್ತಿದೆ ಆದ್ದರಿಂದ ಯಾರಿಗು ಕಾಣಿಸುವುದಿಲ್ಲ. ಹಗಲು ಎಸ್.ಪಿ ಯವರ ಬಳಿಗೆ ಸೇರಿ ಸಮಯಕ್ಕಾಗಿ ಕಾದಿದ್ದು ಸಮಯಸಿಕ್ಕಾಗ ಎಸ್.ಪಿಯವರೊಳಗೆ ಸೇರಿ ಹೊಟ್ಟೆನೋವನ್ನು ಕಲ್ಪಿಸುತ್ತದೆ. ಹೊಟ್ಟೆನೋವನ್ನು ಕಲ್ಪಿಸಿದ ಸೂಕ್ಷ್ಮಶರೀರ ಮತ್ತೆ ರಾತ್ರಿಗೆ ಚೆಕ್‌ಪೋಸ್ಟನ್ನು ದಾಟಿ ಆಕಡೆಗಿರುವ ಆಲದಮರದ ಬಳಿಗೆ ಸೇರುತ್ತಿದೆ. ಆದ್ದರಿಂದ ಪ್ರತಿ ದಿನ ರಾತ್ರಿ ಹೊತ್ತು ಚೆಕ್‌ಪೋಸ್ಟಿನಲ್ಲಿ ಮನುಷ್ಯ ಕಾಡಿನೊಳಗೆ ಹೋದಂತೆ ಕಾಣಿಸುತ್ತದೆ. ಪ್ರತಿ ದಿನ ಹಾವಿನಲ್ಲಿ ಸೇರಿ ಕಾಡಿನಲ್ಲಿನ ಭೈರವನ ಗುಡಿಗೆ ಹೋಗಬೇಕಾಗಿರುವುದರಿಂದ, ಪ್ರತಿ ದಿನ ಎಸ್.ಪಿ. ಯವರಿಗೆ ಹೊಟ್ಟೆಯನ್ನು ನೋಯಿಸಬೇಕಾಗಿರುವುದರಿಂದ, ಈ ಎರಡು ಕಾರ್ಯಗಳನ್ನು ಒಂದೇ ಸೂಕ್ಷ್ಮ ಶರೀರ ಮಾಡುವುದರಿಂದ, ಪ್ರತಿ ದಿನ ಕಾಡಿನ ಹೊರಗೆ ಕಾಡಿನ ಒಳಗೆ ಸೂಕ್ಷ್ಮವು ಪ್ರಯಾಣಿಸಬೇಕಾಗಿ ಬಂದಿದೆ. ಆದ್ದರಿಂದ ಪ್ರತಿ ದಿನ ಚೆಕ್‌ಪೋಸ್ಟಿನಲ್ಲಿ ಮನುಷ್ಯ ಒಳಗೆ ಹೋದಂತೆ ಕಾಣಿಸುತ್ತಿದೆ. ಹುತ್ತ, ಅಲದಮರ ಚೆಕ್‌ಪೋಸ್ಟಿಗೆ ಬಹಳ ಹತ್ತಿರವಾಗಿವೆ ಆದ್ದರಿಂದ, ಹುತ್ತ ಮರ ಎರಡು ಪ್ರತ್ಯೇಕತೆ ಹೊಂದಿವೆಯಾದ್ದರಿಂದ, ನೀವು ಚೆಕ್‌ಪೋಸ್ಟನ್ನು ಅಲ್ಲಿ ಇಲ್ಲದಂತೆ ಮಾಡಿಕೊಳ್ಳುವುದು ಒಳ್ಳೆಯದು. ಕೆಲವು ಸಂದರ್ಭಗಳಲ್ಲಿ

ಹುತ್ತದೊಳಗಿನ ಮಣಿಹಾವು ಸುತ್ತಲೂ ಫರ್ಲಾಂಗ್‌ವರೆಗು ತಿರುಗುತ್ತದೆ ಆದ್ದರಿಂದ ಆ ಹಾವನ್ನು ನೀವು ನೋಡುವುದಾಗಲಿ ಇಲ್ಲವೆ ಆ ಹಾವು ನಿಮ್ಮನ್ನು ನೋಡುವುದಾಗಲಿ ನಡೆದರೆ ಒಳ್ಳೆಯದಲ್ಲ. ಹಾವು ಹೊರಗೆ ಬಂದರೆ ಅದಕ್ಕೆ ಕಾವಲಾಗಿರುವ ಮರದ ಮೇಲಿನ ಸೂಕ್ಷ್ಮವು ಸಹ ಬರುತ್ತದೆ. ಇವೆಲ್ಲವೂ ಆಲೋಚಿಸಿ ನಿಮ್ಮನ್ನು ಅಲ್ಲಿಂದ ಖಾಲಿ ಮಾಡೆಂದೆನು. ನಿಮಗೆ ಇಷ್ಟವಾದರೆ ಕಿಲೋಮೀಟರು ದೂರದಲ್ಲಿ ಚೆಕ್‌ಪೋಸ್ಟನ್ನು ಇಟ್ಟುಕೊಳ್ಳಿ. ಇದೆಲ್ಲವೂ ಯಾರಿಗೂ ತಿಳಿಯದ ವಿವರ. ಇದನ್ನು ನಿಮಗೆ ನಾನು ಹೇಳಿದ್ದೇನೆ ಇದೆಲ್ಲವೂ ಸತ್ಯವೆನಿಸಿದರೆ ನನ್ನ ಮಾತು ಕೇಳಿ ಅಲ್ಲಿಂದ ಹೊರಟು ಹೋಗಿರಿ.

**ಡಿ.ಎಸ್.ಪಿ :** ಕಾಡಿನೊಳಗೆ ನಿಂತುಹೋದ ಬಸ್ಸನ್ನು ಹೇಗೆ ತಂದುಕೊಳ್ಳಬೇಕು ಸ್ವಾಮಿ.

**ಸ್ವಾಮಿ :** ಬರುವ ಅಮಾವಾಸ್ಯೆಯೇ ಶಿವರಾತ್ರಿಯಾಗಿರುವುದರಿಂದ ಆ ದಿನ ಹೋಗಿ ನಾನು ಹೇಳಿದಂತೆ ಪೂಜೆಗಳು ಪ್ರದಕ್ಷಿಣೆಗಳು ಮಾಡಿ ಡೀಜಿಲ್ ಹಾಕಿ ತಂದುಕೊಳ್ಳಿ ತಪ್ಪದೆ ಬರುತ್ತದೆ.

**ಡಿ.ಎಸ್.ಪಿ :** ಸ್ವಾಮಿ ಎಷ್ಟೋ ಪ್ರಶ್ನೆಗಳನ್ನು ಕೇಳಬೇಕಾಗಿದೆ ಆದರೆ ಏನು ಕೇಳುವುದಕ್ಕೆ ಬುದ್ಧಿ ಹುಟ್ಟುತ್ತಿಲ್ಲ. ನೀವು ಹೇಳಿರುವವೆಲ್ಲ ಸತ್ಯವೆನ್ನುವ ನಂಬಿಕೆ ನನ್ನಲ್ಲಿ ಏರ್ಪಟ್ಟಿದೆ. ನಿಮ್ಮ ಮಾತಿನ ಪ್ರಕಾರ ನಮ್ಮ ಎಸ್.ಪಿ ಯವರಿಗೆ ಹೊಟ್ಟೆನೋವು ಹೋಗಿದೆ. ನೀವು ಹೇಳಿದಹಾಗೆ ಚೆಕ್‌ಪೋಸ್ಟ್ ಕಿತ್ತುಹಾಕಿ ಕಾಡಿನೊಳಗೆ ಶಿವರಾತ್ರಿ ಸಮಯದಲ್ಲಿ ಹೋಗಿ ಪೂಜೆಗಳನ್ನು ಮಾಡಿ ಬರುತ್ತೇವೆ.

ಈ ವಿಧವಾಗಿ ಸ್ವಾಮಿಯ ಬಳಿ ಅಪ್ಪಣೆ ತೆಗೆದುಕೊಂಡು ಡಿ.ಎಸ್.ಪಿ ತಿರುಗಿ ಹೋದನು. ಎಲ್ಲ ಸ್ವಾಮಿ ಹೇಳಿದಂತೆ ಮಾಡಿದರು. ಶಿವರಾತ್ರಿ ದಿನದಂದೆ ಆಫ್ರಿಕಾ ಖಂಡದಲ್ಲಿ ದೊಡ್ಡ ಭೂಕಂಪ ಸಂಭವಿಸಿತು. ಆ ಸಂಘಟನೆಯಿಂದ ಸ್ವಾಮಿಯವರು ಹೇಳಿದ ವಾಕ್ಯ ಸತ್ಯವೆಂದು ತಿಳಿಯಿತು. ನಾವು ಸಹ ಕಾಣಿಸುವ ಈ ಪ್ರಪಂಚವೊಂದನ್ನೇ ಧ್ಯಾಸದಲ್ಲಿ ಇಟ್ಟುಕೊಳ್ಳದೆ ಕಾಣಿಸದ ಸೂಕ್ಷ್ಮಶರೀರಗಳ (ಗ್ರಹಗಳ)ನ್ನು ಜ್ಞಾಪಕದಲ್ಲಿಟ್ಟುಕೊಂಡು ಜೀವಿಸೋಣ.

# ಜೀವನದ ನಾಟಕ

ಮಾನವ ಜೀವನವೊಂದು ನಾಟಕವಂತದ್ದು. ನಾಟಕವನ್ನು ಆಟ ಎಂದು ಸಹ ಅನ್ನುತ್ತೇವೆ. ಜೀವನ ಒಂದು ನಾಟಕಕ್ಕೆ ಆಟವಂತದ್ದು. ಒಂದು ನಾಟಕಕ್ಕೆ ಒಬ್ಬ ಡೈರೆಕ್ಟರು (ನಿರ್ದೇಶಕ), ಪ್ರೊಡ್ಯೂಸರ್ (ನಿರ್ಮಾಪಕ) ಇರುವಂತೆ ಮಾನವ ಜೀವನ ಆಟಕ್ಕೂ ಸಹ ಒಬ್ಬ ನಿರ್ಮಾಪಕ, ಒಬ್ಬ ನಿರ್ದೇಶಕ ಇದ್ದಾರೆ. ನಿರ್ಮಾಪಕ ಈ ಸಿನಿಮಾ ತಯಾರು ಮಾಡೆಂದು ನಿರ್ದೇಶಕನಿಗೆ ಹೇಳಿ ಅದಕ್ಕೆ ಬೇಕಾದ ಹಣ ಕೊಟ್ಟು ನಿರ್ದೇಶಕನಿಂದ ಸಿನಿಮಾವನ್ನು ತಯಾರು ಮಾಡಿಸುತ್ತಿದ್ದಾನೆ. ಚಿತ್ರ ನಿರ್ಮಾಣ ಕಾರ್ಯವೆಲ್ಲ ನಿರ್ದೇಶಕನ ಮೇಲೆಯೇ ಆಧಾರಪಟ್ಟಿರುತ್ತದೆ. ಚಿತ್ರನಿರ್ಮಾಣ ಕಾರ್ಯದಲ್ಲಿ ನಟಿ ನಟರೊಂದಿಗೆ ನಿರ್ದೇಶಕನಿಗೆ ಸಂಬಂಧವಿರುತ್ತದೆ. ಹೇಗೆ ಆಡಿಸಬೇಕೆಂದು ನಿರ್ದೇಶಕನ ಮೇಲೆಯೆ ಆಧಾರಪಟ್ಟಿರುತ್ತದೆ. ನಿರ್ಮಾಪಕ ಮಾತ್ರ ತನ್ನ ಚಿತ್ರ ನಿರ್ಮಾಣವನ್ನು ನಿರ್ದೇಶಕನು ಹೇಗೆ ಹೇಳುತ್ತಿರುವುದು ನಟಿ ನಟರು ಹೇಗೆ ಆಡುತ್ತಿದ್ದಾರೆಂಬುದನ್ನು ಪಕ್ಕದಿಂದ ಗಮನಿಸುತ್ತಿರುತ್ತಾನೆ. ಹಾಗೇ ಜೀವನ ನಾಟಕಕ್ಕು ಸಹ ನಿರ್ದೇಶಕ, ನಿರ್ಮಾಪಕ ಇದ್ದಾರೆ. ನಿರ್ಮಾಪಕ ಪರಮಾತ್ಮನಾದರೆ, ನಿರ್ದೇಶಕ ಪ್ರಕೃತಿ ಯಾಗಿದೆ. ಸಿನಿಮಾಗೆ ಹಣಕೊಟ್ಟು ನಟಿನಟರನ್ನು ಆಡಿಸುವಂತೆ ಪರಮಾತ್ಮ ಆತ್ಮ (ಶಕ್ತಿ) ಎನ್ನುವ ಹಣಕೊಟ್ಟು ಜೀವಿಗಳನ್ನು ಆಡಿಸುತ್ತಿದ್ದಾನೆ. ಆತ್ಮ ಚೈತನ್ಯ ಜೀವಿಗಳನ್ನು ಚಲಿಸುವಂತೆ ಮಾಡಿದರೆ, ಆ ಚಲನೆಯನ್ನು ಒಬ್ಬೊಬ್ಬರಿಗೆ ಒಂದೊಂದು ವಿಧದಲ್ಲಿದ್ದು ಒಬ್ಬೊಬ್ಬರ ಆಟ ಒಂದೊಂದು ವಿಧದಲ್ಲಿ ಇರುವಂತೆ ಮಾಡುತ್ತದೆ ಪ್ರಕೃತಿ. ಜಾದುಗಾರ ಬೊಂಬೆಗಳನ್ನು ಆಡಿಸುವಂತೆ ಸಕಲ ಜೀವಿಗಳನ್ನು ನಾನು ಆಡಿಸುತ್ತಿದ್ದೇನೆಂದು ಭಗವದ್ಗೀತೆಯಲ್ಲಿ ಭಗವಂತನಾಗಿರುವ ಪರಮಾತ್ಮ ನುಡಿದಿದ್ದಾನೆ. ಪರಮಾತ್ಮ ಸೃಷ್ಠಿಸಿದ ಈ ಸೃಷ್ಠಿಯಲ್ಲಿ ಸಕಲ ಮನುಷ್ಯರ ಜೀವನಗಳೆಲ್ಲವೂ ಆಟಗಳಾಗಿವೆ. ಆದರೆ ನಮ್ಮ ನಿತ್ಯ ಕೃತ್ಯಗಳು ನಾಟಕೀಯವಾಗಿ ನಡೆಯುತ್ತಿರುವ ಆಟಗಳೆಂದು ನಾವು ಇನ್ನೊಬ್ಬರಿಂದ ಆಡಲ್ಪಡುವ ಬೊಂಬೆಗ ಳೆಂದು ಮಾನವನಿಗೆ ತಿಳಿದಿಲ್ಲ.

ನಮ್ಮ ಜೀವನಗಳೆಲ್ಲವು ಮೊದಲೇ ನಿರ್ಣಯಿಸಲ್ಪಟ್ಟಿರುವ ಪಾತ್ರಗಳ ನಿರ್ಣಯದ ಪ್ರಕಾರ ಪ್ರಕೃತಿ ಜನಿತ ಗುಣಗಳಿಂದ ಆಡಲ್ಪಡುವ ಆಟಗಳೆಂದು ಮಾನವನಿಗೆ ತಿಳಿಯುವಂತೆ ನಾವು ಮಾಡುವ ಕೆಲಸಗಳಲ್ಲಿ ಬಹಳ ಭಾಗ ಆಟಗಳೆಂದು ಹೆಸರುಗಳಿಟ್ಟು ಮಾತನಾಡುವಂತೆ ತಿಳಿದ ಹಿರಿಯರು ಹೇಳಿದ್ದಾರೆ. ನಮ್ಮ ಕಾರ್ಯಗಳಲ್ಲಿ ಆಟಗಳೆನ್ನುವ ಹೆಸರುಗಳು ಇರುವ ಆಟಗಳ ಹೆಸರುಗಳು ಹೀಗಿವೆ.

| | | | |
|---|---|---|---|
| 1) | ಆಟ ಆಡುವುದು | 2) | ಜಗಳ ಆಡುವುದು |
| 3) | ಗುದ್ದಾಡುವುದು | 4) | ಹೊಡೆದಾಡುವುದು |
| 5) | ಬೈಯ್ದಾಡುವುದು | 6) | ಸ್ನಾನ ಮಾಡುವುದು |
| 7) | ಈಜಾಡುವುದು | 8) | ಹಗ್ಗ ಎಳೆದಾಡುವುದು |
| 9) | ನಾಟ್ಯಮಾಡುವುದು | 10) | ಹಾಡು ಹಾಡುವುದು |
| 11) | ಹಾಸ್ಯಮಾಡುವುದು | 12) | ನೀರಲ್ಲಿ ಆಡುವುದು |
| 13) | ವಸಂತವಾಡುವುದು | 14) | ಜೂಜು ಆಡುವುದು |
| 15) | ನಗೆಯಾಡುವುದು | 16) | ಓಡಾಡಿಸುವುದು |
| 17) | ಎಗರಾಡುವುದು | 18) | ದೂಕಾಡುವುದು |
| 19) | ಬೇಡಿಕೊಳ್ಳುವುದು | 20) | ಒಪ್ಪಿಸುವ ಆಟ |
| 21) | ಎಳೆದಾಡುವುದು | 22) | ಚಂಡಾಡುವುದು |
| 23) | ಚೆಂಡು ಆಡುವುದು | 24) | ಸುಳ್ಳಾಟ |
| 25) | ಅಸತ್ಯವಾಡುವುದು | 26) | ಮದುವೆ ಆಟ ಅಡುವುದು |
| 27) | ಹಿರೆತನ ಮಾಡುವುದು | 28) | ಚೌಕಾಸಿಮಾಡುವುದು |
| 28) | ಗಿಚ್ಚಾಡುವುದು | 29) | ವ್ಯವಹಾರ ಮಾಡುವುದು |
| 30) | ಮುದ್ದಾಡುವುದು | 31) | ಪಂದ್ಯ ಆಡುವುದು |
| 32) | ಸರಸವಾಡುವುದು | 33) | ಭೇಟೆಯಾಡುವುದು |
| 34) | ದೂಕಾಡುವುದು | 35) | ಹುರುಳಾಡುವುದು |
| 36) | ದೂಕಾಡುವುದು | 37) | ಕಣ್ಣು ಮುಚ್ಚಾಲೆ ಆಟ |

ಆಡುವುದು 38) ಮಾತಾಡುವುದು 39) ಓಡುವ ಆಟ 40) ಜಗಳಾಡುವುದು

ಈ ವಿಧದಲ್ಲಿ ನಮ್ಮ ಜೀವನ ಎಷ್ಟೋ ಆಟಗಳಮಯವಾಗಿದೆ. ಪರಮಾತ್ಮ ನೋಡುತ್ತಿದ್ದು ಪ್ರಕೃತಿಯಿಂದ ಆಡಲ್ಪಡುವ ನಾವು ಪ್ರಕೃತಿಯನ್ನಾಗಲಿ, ಪರಮಾತ್ಮನನ್ನಾಗಲಿ ಗುರುತಿಸದೆ ಇವೆಲ್ಲವೂ ನಾವು ನಮ್ಮ ಸ್ವತಃವಾಗಿ ಆಡುವವೇಯೆಂದು ಅಂದುಕೊಂಡು ತಪ್ಪಾಗಿ ತಿಳಿಯುತ್ತಿದ್ದೇವೆ. ಆದರೆ ತಿಳಿದ ಹಿರಿಯರು ಪ್ರಪಂಚ ಒಂದು ನಾಟಕರಂಗವೆಂದು ಎಂದೋ ಹೇಳಿದ್ದಾರೆ. ಈ ಪ್ರಪಂಚ ರಂಗಸ್ಥಳದ ಮೇಲೆ ನಮ್ಮ ಪಾತ್ರಗಳು ಎಷ್ಟೋ ವಿಧಗಳಲ್ಲಿದ್ದರೂ ಇವು ಪಾತ್ರಗಳೆಂದು ಗುರುತಿಸದ ನಾವು ಜೀವನ ಸ್ವಲ್ಪ ಕಾಲವಿರುವ ಒಂದು ಪಾತ್ರವೆಂದು ಆ ಜೀವನ ಇರುವವರೆಗೆ ಅವನು ಮಗನೆಂದು, ಈಕೆ ಹೆಂಡತಿಯೆಂದು, ಇವರು ಅಣ್ಣತಮ್ಮಂದಿರೆನ್ನುವ ಭಾವವಿರಬೇಕೆಂದು ನಿಜಕ್ಕೂ ಅವರು ತನಗೆಂತಹ ಸಂಬಂಧವಿಲ್ಲದವರೆಂದು ತಿಳಿಯದೆ ನನ್ನವರೆ ಎಂಬ ಭ್ರಮೆಯಲ್ಲಿ ಮುಳುಗಿ ಹೋಗುತ್ತಿದ್ದಾರೆ.

ಒಂದು ನಾಟಕದಲ್ಲಿ ರಂಗಸ್ಥಳದ ಮೇಲೆ ಕೆಲವರು ನಟಿನಟರು ಸೇರಿ ಕುಚೇಲ ಸಂಸಾರವೆನ್ನುವ ನಾಟಕವನ್ನು ನಿರ್ವಹಿಸುತ್ತಾರೆಂದುಕೊಳ್ಳೋಣ. ಅದರಲ್ಲಿ ಹೆಂಡತಿ ವೇಷ ಹಾಕಿದ ಆಕೆ ಗುಂಟೂರಿನಿಂದ ಬಂದಿರುತ್ತಾಳೆ. ಗಂಡನ ವೇಷ ಹಾಕಿದವನು ಹೈದರಾಬಾದ್‌ನಿಂದ ಬಂದಿದ್ದಾನೆ. ಮಕ್ಕಳ ವೇಷ ಹಾಕಿದವರು ಮುದ್ದನೂರಿನಿಂದ ಕೆಲವರು, ಪ್ರೊದ್ದುಟೂರಿನಿಂದ ಕೆಲವರು ಬಂದಿದ್ದಾರೆ. ಆ ನಾಟಕದಲ್ಲಿ ಕುಚೇಲನ ವೇಷ ಹಾಕಿದ ವೆಂಕಯ್ಯ ಎನ್ನುವವನು ನಾಟಕ ಆಡುವವರೆಗು ಗುಂಟೂರಿನಿಂದ ಬಂದ ಲತಾದೇವಿ ಎನ್ನುವ ಆಕೆಯನ್ನು ಹೆಂಡತಿಯಂತೆ ಮಾತನಾಡಿಸುತ್ತ ಹತ್ತಿರ ಹತ್ತಿರವಾಗಿದ್ದರೂ ಮೇಲ್ನೋಕ್ಕೆ ಕುಚೇಲನಂತೆ ಪೂರ್ತಿಲಗ್ನವಾಗಿದ್ದರು ತನ್ನದು ಹೈದರಾಬಾದಾಗಿರುವುದು ತಾನು ಇಂತಹ ವೆಂಕಯ್ಯನೆಂಬ ವಿಷಯ ಅಂತರಂಗದಲ್ಲಿ ಜ್ಞಾಪಕ ಇರುತ್ತದೆ. ಹಾಗೆ ಆಕೆಯು ಸಹ ತನ್ನದು ಗುಂಟೂರೆಂದು ತನ್ನ ಹೆಸರು ಲತಾದೇವಿಯೆಂದು

ಮರೆಯದಿರುವಳು. ಮೇಲ್ನೋಟಕ್ಕೆ ನಾವು ಬಡವರೆಂದು ಬಾಧೆಪಡುತ್ತಿದ್ದರೂ ನಿಜವಾಗಿ ಅವರು ಬಡವರಲ್ಲ ಎಂಬ ಭಾವನೆ ಅವರಿಗಿರುತ್ತದೆ. ಆ ವಿಧದಲ್ಲಿಯೆ ಜೀವನ ನಾಟಕದಲ್ಲಿ ತಾನೊಬ್ಬ ಜೀವಾತ್ಮನೆಂದು ಎಷ್ಟೋ ಜೀವಾತ್ಮರು ಕುಟುಂಬವೆನ್ನುವ ಹೆಸರಿರುವ ನಾಟಕದಲ್ಲಿ ಪಾತ್ರಗಳು ವಹಿಸುತ್ತಾರೆಂದು ತಿಳಿದು ಜ್ಞಾಪಕದಿಂದಿರಬೇಕು. ಕುಟುಂಬ ವಿಷಯದಲ್ಲಿ ಕೆಲವು ಕಡೆ ಬಾಧೆ ಸಂತೋಷಗಳು ಬಂದರು ಅವು ಮೆಲ್ನೋಟಕ್ಕೆ ಕಾಣಿಸುವಂತಿದ್ದರೂ ತನ್ನ ಅಂತರಂಗದಲ್ಲಿ ಇವೆಲ್ಲಾ ಬರುವವು ಹೋಗುವವೆಂದು, ತಾನೊಬ್ಬ ಜೀವಾತ್ಮನೆಂದು ಮೇಲೆ ನಡೆಯುವವು, ತನಗಲ್ಲವೆಂದು, ತನ್ನ ಜೀವನದಲ್ಲಿ ನಡೆಯುವವೇ ಎಂದು ಜ್ಞಾಪಕದಿಂದ ಇರಬೇಕು. ಆಗಿರುವಾಗ ಗೀತೆ ಹೇಳಿದಂತೆ ಜ್ಞಾನವಿದ್ದರೂ ಸರ್ವದುಃಖಗಳಿಗು ಹಾನಿಯಾಗುವುದೆಂಬ ಮಾತು ನಿಜವಾಗುತ್ತದೆ. ಆದ್ದರಿಂದ ಜೀವಿಗಳಾದ ನಾವು ಅನೇಕ ಜನ್ಮಗಳ ನಾಟಕಗಳಲ್ಲಿ ಪಾಲ್ಗೊಳ್ಳುವವರೆಂದು, ನಮ್ಮ ಸ್ವಸ್ಥಳ ಬೇರೆಯೆಂದು, ನಮ್ಮ ಹೆಸರು ಬೇರೆಯೆಂದು ನೆನೆದು ಜೀವನ ನಾಟಕದಲ್ಲಿ ಮುಳುಗಿ ತನ್ನ ಊರಿನ ಹೆಸರು ತಿಳಿದು ಸ್ವಸ್ಥಳವನ್ನು ಸೇರಿದರೆ ಅದೇ ಮೋಕ್ಷವಾಗುತ್ತದೆ. ಸ್ವಸ್ಥಳವಾದ ಮೋಕ್ಷವನ್ನು ಸೇರಿದವನು ಇನ್ನು ಜೀವನ ನಾಟಕವನ್ನು ಆಡುವುದಕ್ಕೆ ಪ್ರಪಂಚ ರಂಗಸ್ಥಳದ ಮೇಲೆ ಬರುವ ಅಗತ್ಯವಿಲ್ಲ.

ಹಾಗೆಂದು ನಾನು ಮದುಕನಾಗಿದ್ದೇನಲ್ಲ! ನನ್ನೊಂದಿಗೆ ನನ್ನ ಕುಟುಂಬದವರಿಗೆ ಏನು ಕೆಲಸವಿಲ್ಲವಲ್ಲ! ಇಲ್ಲಿ ಏಕೆ ಸುಮ್ಮನಿರಬೇಕು ಎಲ್ಲಿಗಾದರೂ ಗುರುವಿನ ಬಳಿಗೆ ಸೇರಿ ಈಗಲಾದರೂ ಜ್ಞಾನ ತಿಳಿದುಕೊಳ್ಳೋಣವೆಂದು ಪ್ರಯತ್ನಿಸಿದಾಗಲು ಸಹ ಎಷ್ಟೋ ಅಡಚಣೆಗಳು ಈ ನಾಟಕದಲ್ಲಿ ಏರ್ಪಡಬಹುದು. ಏಕೆಂದರೆ ಈ ಪ್ರಪಂಚದಲ್ಲಿ ನಾಟಕಗಳನ್ನಾಡಿಸುವುದು ಪ್ರಕೃತಿಯೆ ಅಲ್ಲವೆ! ಆದ್ದರಿಂದ ಪ್ರಕೃತಿ ಪರಮಾತ್ಮನಕಡೆ ಯಾರನ್ನೂ ಹೋಗದಂತೆ ಮಾಡುವುದು ಅದರ ಸಹಜ. ಆದ್ದರಿಂದ ಅದರ ಕೈಯಲ್ಲಿನ ನಾಟಕದಲ್ಲಿ ದೈವದಕಡೆಗೆ ಪ್ರಯಾಣಿಸುವವರಿಗೆ ವಿಧವಿಧವಾದ ಅಡಚಣೆಗಳನ್ನು ಕಲ್ಪಿಸುತ್ತದೆ.

ಆ ಅಡಚಣೆಗಳನ್ನು ದಾಟಬೇಕೆಂದರೆ ಬಹಳ ಕಷ್ಟ. ಆದ್ದರಿಂದ ಭಗವದ್ಗೀತೆಯಲ್ಲಿ ವಿಜ್ಞಾನಯೋಗ 14ನೇ ಶ್ಲೋಕದಲ್ಲಿ **'ನನ್ನಿಂದ ನಿರ್ಮಿಸಲ್ಪಟ್ಟಿರುವ ಗುಣಗಳ ಮಯವಾದ ಮಾಯೆಯನ್ನು (ಪ್ರಕೃತಿ) ದಾಟುವುದು ಅಸಾಧ್ಯ.'** ಎಂಬ ಮಾತನ್ನು ಶ್ರೀಕೃಷ್ಣನು ಸಹ ಹೇಳಿದ್ದಾನೆ. ಅದು ನಿಜವಾದ ಮಾತಾಗಿರುವುದರಿಂದ ಮಾಯೆಯಿಂದ ಆಡಲ್ಪಡುವ ಈ ಮಾಯೆ ನಾಟಕಗಳಲ್ಲಿ ಜ್ಞಾನ ಮಾರ್ಗದಲ್ಲಿ ಒಬ್ಬ ವ್ಯಕ್ತಿಗೆ ತನ್ನ ಹೆಂಡತಿ ಆಡಚಣೆಯಾಗಿ ನಿಲ್ಲುತ್ತಾಳೆ. ಇನ್ನೊಬ್ಬರಿಗೆ ತನ್ನ ಕುಮಾರರು ಆತಂಕವಾಗಿ ನಿಲ್ಲುವರು. ಮತ್ತೊಬ್ಬರಿಗೆ ತಾಯಿ, ಒಬ್ಬನಿಗೆ ತಂದೆ ಮತ್ತೊಬ್ಬನಿಗೆ ಬಂಧುಗಳು ಹೀಗೆ ಎಷ್ಟೋ ಜನ ಎಷ್ಟೋ ಸಮಸ್ಯೆಗಳ ರೂಪದಲ್ಲಿ ನಿಲ್ಲುವರು. ಆಗ ಅವರನ್ನು ಅಲ್ಲವೆಂದು ಅವರಿಗೆ ವಿರುದ್ಧವಾಗಿ ನಡೆಯಬೇಕೆಂದರೆ ಬಹಳ ಕಷ್ಟ. ಇವರೆಲ್ಲ ಸ್ವಲ್ಪಕಾಲ ಇರುವವರೆ! ಇರುವವರೆಗೇ ನನ್ನವರೆಂಬ ಭ್ರಮೆ! ನಿಜವಾಗಿ ಯಾರ ಪಾತ್ರ ಅವರದು. ಪಾತ್ರ ಮುಗಿದು ಹೋದಾಗ ಗಂಡ ಸ್ಟೇಜು ಇಳಿದು ಹೋಗುತ್ತಾ ಇದ್ದರೆ ಹೆಂಡತಿಯಾಗಿದ್ದ ಆಕೆಯಾಗಲಿ, ಮಕ್ಕಳಾಗಲಿ, ಬಂಧುಗಳಾಗಲಿ ಯಾರೂ ಹಿಂದೆ ಬರುವುದಿಲ್ಲ ಅಲ್ಲವೆ ಆಗಿರುವಾಗ ಇವರೊಂದಿಗೆ ನನಗೇನು ಕೆಲಸ ಇವರ ದಾರಿ ಇವರದು ನನ್ನದಾರಿ ನನ್ನದೆಂದು ನೀನು ಜ್ಞಾನದಕಡೆಗೆ ಸಾಗಿದರೆ ಹೆಂಡತಿಯಾಗಿದ್ದ ಆಕೆ ಸಮಯಕ್ಕೆ (ತಕ್ಕಸಮಯಕ್ಕೆ) ಅಡಿಗೆ ಮಾಡುವುದಿಲ್ಲ. ನಾನು ವಿಷ ಕುಡಿದು ಸತ್ತುಹೋ ಗುತ್ತೇನೆನ್ನುತ್ತಾಳೆ. ಒಂದು ವಿಧವಲ್ಲ ಬಿಡ್ರಿ ಬಹಳ ವಿಧಗಳಲ್ಲಿರುತ್ತವೆ ಆ ಸಮಸ್ಯೆಗಳು. ಉದಾಹರಣೆಗೊಂದು ವಿವರಿಸುತ್ತೇನೆ ನೋಡಿರಿ.

ಒಬ್ಬ ವ್ಯಕ್ತಿ ತನ್ನ ಕೈಲಾಗುವವರೆಗು ಉದ್ಯೋಗ ಮಾಡಿ ಕೊನೆಗೆ ರಿಟೈರ್ಡ್ ಆಗಿದ್ದಾನೆ ಎಂದುಕೊಳ್ಳೋಣ. ಆಗ ಅರವತ್ತು ಸಂವತ್ಸರಗಳ ಮೇಲಿರುವ ಆ ವ್ಯಕ್ತಿ ಒಂದು ದಿನ ಹೀಗೆ ಅಂದುಕೊಂಡನು. 'ನಾನು ಇಷ್ಟುಕಾಲ ಉದ್ಯೋಗ ಮಾಡಿ ಹೆಂಡತಿ ಮಕ್ಕಳನ್ನು ಪೋಷಿಸಿದ್ದೇನೆ. ಅಷ್ಟೋ ಇಷ್ಟೋ ಹಣ ಸಂಪಾದಿಸಿಕೊಂಡಿದ್ದೇನೆ. ಆದರೂ ಎಲ್ಲರಹಾಗೆ ನಾನು ಸಹ ಒಂದು ದಿನ ಸತ್ತುಹೋಗಬೇಕಾದ ಕಾಲ ಹತ್ತಿರವಾಗಿದೆ. ಈಗಿರುವ ಹಣವಾಗಲಿ ಈ ಹೆಂಡತಿ

ಮಕ್ಕಳಾಗಲಿ ಹಿಂದೆ ಬರುವುದಿಲ್ಲ. ನನ್ನ ಹಿಂದೆ ಬರುವುದೇನಾದರೂ ಇದೆಯಾ ಎಂದು ಅಂದುಕೊಂಡರೆ ಈ ಪ್ರಪಂಚದಲ್ಲಿ ಏನೂ ಇಲ್ಲ. ಕೆಲವರು ಹಿರಿಯರು ಜ್ಞಾನ ತಿಳಿದುಕೊಳ್ಳಿ ಅದೇ ನಮ್ಮ ಹಿಂದೆ ಬರುವ ಧನವೆನ್ನುತ್ತಿದ್ದಾರೆ. ಆ ಮಾತು ವಾಸ್ತವವೆಂದುಕೊಳ್ಳುವಂತೆ ಕೆಲವರು ಹುಟ್ಟಿನಿಂದಲೆ ಜ್ಞಾನಿಗಳಾಗಿ ಇದ್ದಾರೆ. ಹಿಂದಿನ ಜನ್ಮ ಸಂಸ್ಕಾರದಿಂದ ಅವರು ಹುಟ್ಟಿನಿಂದಲೆ ಜ್ಞಾನಿಗಳೆಂಬ ಮಾತು ಕೇಳುತ್ತಿದ್ದೇವೆ. ಕೆಲವು ಜನ್ಮಗಳ ಜ್ಞಾನಾರ್ಜನೆ ಜನ್ಮಗಳಿಂದ ಮುಕ್ತಿ ಕೊಡುತ್ತದೆನ್ನುವ ಮಾತು ಸಹ ಕೇಳಿದ್ದೇವೆ. ಪೂರ್ವದಲ್ಲಿ ಎಷ್ಟೋ ನಮಗಿಂತ ತಿಳುವಳಿಕೆಯಾದವರು ಸಿದ್ಧಾರ್ಥ (ಬುದ್ಧ), ವಿಶ್ವಾಮಿತ್ರ ಮೊದಲಾದವರು ಸಹ ಅವರವರ ದೊಡ್ಡ ರಾಜ್ಯಗಳನ್ನು ಬಿಟ್ಟು ಜ್ಞಾನಾರ್ಜನೆ ಮಾಡಿದ್ದಾರೆ. ಇಲ್ಲಿಯವರೆಗು ಧನಾರ್ಜನೆ ಮಾಡಿದ ನಾನು ಈಗಿನಿಂದಾದರೂ ನನ್ನ ಹಿಂದೆ ಬರುವ ಜ್ಞಾನವನ್ನು ಸಂಪಾದಿಸುವುದಕ್ಕೆ ಸಿದ್ಧವಾಗಿರಬೇಕು. ಜೀವನ ನಾಟಕದಲ್ಲಿ ನಾನು ಕೇವಲ ಪಾತ್ರಧಾರಿಯೇ ಎಂಬ ಮಾತು ಮರೆತು ನಾಟಕದಲ್ಲಿರುವವರೆಲ್ಲ ನನ್ನವರೆ ಎಂದುಕೊಳ್ಳುವುದು ತಪ್ಪು. ಇನ್ನು ಅವರೊಂದಿಗೆ ಯಾವ ವಿಧದಲ್ಲಿರಬೇಕೊ ಹಾಗೇ ಇರುತ್ತಾ ಜ್ಞಾನ ತಿಳಿದುಕೊಳ್ಳಬೇಕು.'

ಹೀಗೆ ಯೋಚಿಸಿದ ಆ ವ್ಯಕ್ತಿ ಒಬ್ಬ ಗುರುವನ್ನು ಆಶ್ರಯಿಸಿ ಆಗಾಗ ಅಲ್ಲಿಗೆ ಹೋಗಿ ಜ್ಞಾನವನ್ನು ತಿಳಿದುಕೊಂಡು ಬರುತ್ತಿದ್ದನು. ಒಂದುಬಾರಿ ಗುರುವಿನ ಬಳಿಗೆ ಹೋದ ಆ ಮನುಷ್ಯ ಹದಿನೈದು ದಿನಗಳು ಮನೆಗೆ ತಿರುಗಿ ಬರಲಿಲ್ಲ. ಗುರುಗಳ ಜ್ಞಾನ ಪ್ರಚಾರದಲ್ಲಿ ಇತರರಿಗು ಸಹ ಜ್ಞಾನವಿದುಯೆಂದು ತಿಳಿಸುವುದಕ್ಕೆ ಇತರೆ ಪ್ರಾಂತಗಳಿಗೆ ಆತನು ಹೋಗಿದ್ದನು. ಆಗ ಮನೆಯಿಂದ ಆತನ ಹೆಂಡತಿ ಮಗ ಬಂದು ಗುರುಗಳೊಂದಿಗೆ ವಾದಿಸತೊಡಗಿದರು. ಆ ವಾದ ಹೇಗಿದೆಯೆಂದರೆ :–

**ಹೆಂಡತಿ :** ಏನಯ್ಯಾ ಗುರುಗಳೆ! ನನ್ನ ಗಂಡ ಬಂದು 15 ದಿನಗಳಾದವು. ಇಲ್ಲಿಯು ಸಹ ಇಲ್ಲ. ಎಲ್ಲಿಗೆ ಹೋಗಿದ್ದಾನೆ.

**ಗುರು :–** ನಿನ್ನ ಗಂಡ ಜ್ಞಾನಕಾರ್ಯದ ಮೇಲೆ ಹೋಗಿದ್ದಾನಮ್ಮಾ, ಇಷ್ಟರಲ್ಲೆ ಬರುತ್ತಾನೆ.

**ಹೆಂಡತಿ :** ಹೀಗೆ ಜ್ಞಾನವೆಂದು ಇಷ್ಟು ದಿನಗಳು ಇಲ್ಲಿ ಅಲ್ಲಿ ಇದ್ದರೆ ನಮಗೆ ಸಂಸಾರಗಳು ಇಲ್ಲವೆ? ನಮಗೆ ಕೆಲಸಗಳು ಇರುವುದಿಲ್ಲವೆ?

**ಗುರುವು :** ಆತನು ನನಗೇನು ಕೆಲಸವಿಲ್ಲವೆಂದನಲ್ಲ. ನನ್ನಿಂದ ನಮ್ಮವರಿಗೆ ಯಾವ ಅವಶ್ಯವೂ ಇಲ್ಲವೆಂದು, ಆತನೆ ನಾವು ಬೇಡವೆಂದರೂ ಹೋಗಿದ್ದಾನೆ. ಬಂದ ತಕ್ಷಣವೇ ಕಳುಹಿಸುತ್ತೇವೆ.

**ಮಗ :** ನಮ್ಮ ಅಪ್ಪನಿಗಂತೂ ಬುದ್ಧಿಯಿಲ್ಲ! ಇಷ್ಟು ದಿನಗಳು ಇಟ್ಟುಕೊಳ್ಳುವುದಕ್ಕೆ ನಿಮಗೆ ಬುದ್ಧಿ ಇಲ್ಲವೆ! ಎಂದು ಯಾರಾದರೂ ಅನ್ನುತ್ತಾರಲ್ಲ!

**ಗುರುವು :** ಯಾರಾದರೂ ಏಕೆ ಹೇಳಿ ನೀವೇ ಪ್ರತ್ಯಕ್ಷವಾಗಿ ಅನ್ನುತ್ತಿದ್ದೀರಲ್ಲ! ನಿಮ್ಮ ಅಪ್ಪನಿಗು, ನನಗು ಬುದ್ಧಿ ಇರುವುದರಿಂದಲೆ ಆತನು ಆ ಕಾರ್ಯದ ಮೇಲೆ ಹೋಗುತ್ತೇನೆಂದನು. ಸರಿಯೆಂದು ನಾನಂದೆನು.

**ಮಗ :** ಇದೆಂತಹ ಭಕ್ತಿ ಇಷ್ಟು ದಿನಗಳು ಮನೆ ಬಿಟ್ಟು ಇರುವುದು. ಯಾರಾದರೂ ಗುರುಗಳು ಮಾರ್ಗದರ್ಶಕರಾಗಿ ಇರಬೇಕು ಆದರೆ ಹೀಗಾ?

**ಗುರುವು :** ನಿನ್ನ ಮಾತು ನಾನೊಪ್ಪಿಕೊಳ್ಳುತ್ತೇನೆ ನಮ್ಮದು ಭಕ್ತಿಯಲ್ಲವೆಂದು. ನಾನೊಂದು ಪ್ರಶ್ನೆ ಕೇಳುತ್ತೇನೆ ಉತ್ತರ ಹೇಳು. ನೀನು ತಲೆಬೆಳೆಸಿ ಬಾಬಾ ನನಗೆ ಆಗಾಗ ಪ್ರತ್ಯಕ್ಷವಾಗಿ ಮಾತನಾಡುವನೆಂದು ನಾನು ಬಾಬಾ ಭಕ್ತನೆಂದು ಹೇಳಿಕೊಳ್ಳುತ್ತಿರುತ್ತೀಯಲ್ಲ! ಬಾಬಾ ಹತ್ತಿರ ತಿಂಗಳಗಟ್ಟಲೆ ಕೆಲವರಿರುತ್ತಾರಲ್ಲ! ಆಗ ಅವರಿಗೆ ಬುದ್ಧಿ ಇಲ್ಲವೆ? ಇವರಿಗೆ ಬುದ್ಧಿಯಿಲ್ಲವೆಂದು ನೀನು ಅನ್ನಬಾರದಾ. 15 ದಿನಗಳಿಗೆ ಬುದ್ಧಿ ಇಲ್ಲೆಂದವನು ಅಷ್ಟೋ ಇಷ್ಟೋ ಭಕ್ತನೆಂದು ಗುರುತಿಗೆ ತಲೆಕೂದಲುಗಳನ್ನು ಬೆಳೆಸಿದವನು ನೀನು ಹೀಗೆ ಮಾತನಾಡಿದರೆ ಏನು ಚೆನ್ನಾಗಿರುತ್ತದೆ.

ಮೇಲಾಗಿ ಮಾರ್ಗದರ್ಶಕರಂತೆ ಇರಬೇಕೆಂದಿದ್ದೀಯ. ಗುರುಗಳೆಂದು ಹತ್ತಿರಕ್ಕೆ ಬಂದರೆ ಸಾಯಂಕಾಲದವರೆಗು ದರ್ಶನವಿಲ್ಲ ಅನ್ನುವುದು, ಕೆಲವು ದಿನಗಳವರೆಗು ಮಾತನಾಡದಂತಿರುವುದು ಮಾರ್ಗದರ್ಶಕವಾ? ನಮ್ಮ ಹಾಗೆ ತಕ್ಷಣವೇ ಕರೆದು ಆಪ್ಯಾಯತೆಯಿಂದ ಮಾತನಾಡಿಸುವುದು ಮಾರ್ಗ ದರ್ಶಕವಲ್ಲವೆ?

**ಮಗ :** ನಿಮ್ಮ ಪದ್ಧತಿ ನಮಗೆ ಇಷ್ಟವಾಗುತ್ತಿಲ್ಲ. ಬಾಬಾರವರು ಯಾರಿಗೂ ಕೆಲಸಗಳನ್ನು ಹೇಳುವುದಿಲ್ಲ.

**ಗುರು :** ಹೌದು ಆತನು ನಮ್ಮ ಹಾಗೆ ಬಂದವರನ್ನು ಜ್ಞಾನ ಪ್ರಚಾರಕ್ಕೆ ವಿನಿಯೋಗಿಸಿದ್ದರೆ ಜ್ಞಾನ ಚಿಕ್ಕ ಹಳ್ಳಿಗಳಲ್ಲಿಯು ಸಹ ತಿಳಿದಿರುತ್ತಿತ್ತು. ಹಾಗಲ್ಲದೆ ಆತನು ಭಜನೆಗಳನ್ನು ಮಾಡಿಸಿದ್ದರಿಂದ ನಿಮ್ಮಂತಹ ತಿಳಿಯದ ಮನುಜರು ಕೂದಲು ಬೆಳೆಸಿಕೊಂಡಿದ್ದೀರ. ನಿಮಗೆ ಜ್ಞಾನ ತಿಳಿಯದೇ ವಿಧ ವಿಧವಾದ ವೇಷಗಳನ್ನು ಹಾಕುತ್ತಾ ಜ್ಞಾನಿಗಳ ಹಾಗೆ ನಟಿಸುತ್ತಾ ಅಷ್ಟೋ ಇಷ್ಟೋ ಜ್ಞಾನ ಮಾರ್ಗದಲ್ಲಿ ಹೋಗುವವರಿಗೆ ಅಡ್ಡವಾಗುತ್ತಿದ್ದೀರ. ನಿಮ್ಮ ಅಪ್ಪನಿಗಿರುವ ಜ್ಞಾನ ನಿನಗಿಲ್ಲ. ನೀನು ಆತನಿಗೆ ಬುದ್ಧಿಯಿಲ್ಲವೆಂದು ಅನ್ನುತ್ತೀಯ! ಆತನಿಗೆ ಅಷ್ಟೋ ಇಷ್ಟೋ ಜ್ಞಾನವಿದೆಯಾದ್ದರಿಂದ ಜ್ಞಾನವೆನ್ನುವುದು ವೇಷದಲ್ಲಿರುವುದಿಲ್ಲವೆಂದು ನಿನ್ನ ಹಾಗೆ ವೇಷ ಹಾಕಲಿಲ್ಲ. ನೀನು ಎಲ್ಲರಿಂದ ಭಜನೆಗಳು ಮಾಡಿಸಿದರೆ ಆತನು ಜ್ಞಾನವಿದು ಎಂದು ಇತರರಿಗೆ ತಿಳಿಸುವ ಕಾರ್ಯಕ್ಕೆ ಹೋಗಿದ್ದಾನೆ. ಯಾರದು ಒಳ್ಳೆಯ ಕೆಲಸವೋ ಒಂದು ಬಾರಿ ಆಲೋಚಿಸು.

**ಮಗ :** ನಮ್ಮ ಸ್ವಾಮಿಯವರು ಹೆಚ್ಚಿನ ಮಹತ್ವವಿರುವವರು, ಅವರ ಭಜನೆಗಳು ಮಾಡಿದರೆ ಎಷ್ಟೋ ಒಳ್ಳೆಯದು. ನಮ್ಮ ಸ್ವಾಮಿ ಫೋಟೋದಲ್ಲಿ ಸಹ ವಿಭೂತಿ ಬೀಳುತ್ತದೆ. ನಿಮಗೇನು ಮಹತ್ವವಿದೆ. ನಿಮ್ಮ ಜ್ಞಾನ ಪ್ರಚಾರ ಮಾಡುವುದಕ್ಕೆ.

**ಗುರು :** ಮಹತ್ವಗಳು ತೋರಿಸುವವನು ಮಧ್ಯದವನು ಎಂದು ವೇಮನ ಯೋಗಿ ಹೇಳಿದಹಾಗೆ ನಿಜವಾದ ಜ್ಞಾನಕ್ಕೆ ಮಹಿಮೆಗಳಿರುವುದಿಲ್ಲ. ಮಹಿಮೆಗಳೆಲ್ಲ ಜನಾಕರ್ಷಣೆಗೋಸ್ಕರವೆಂದು ತಿಳಿದುಕೋ. ಸ್ಮಶಾನದಲ್ಲಿ ಕಲ್ಲುಗಳಿಟ್ಟು ಇಂತಹ ಮನೆಯೆಂದು ಮಂತ್ರಿಸಿದರೆ ಆ ಮನೆಯೊಳಗೆ ಹೋಗಿ ಆ ಕಲ್ಲುಗಳು ಬೀಳುತ್ತವೆ. ಅದನ್ನು ಕಲ್ಲುಗಳ ತಂತು ಅನ್ನುತ್ತಾರೆ. ಅದೇ ವಿಧದಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆ ವಿಭೂತಿ ಹೋಗಿ ಬೀಳುವುದನ್ನು ಭೂದಿ ತಂತು ಅನ್ನುತ್ತಾರೆ. ನಿನಗೆ ಆ ವಿಷಯಗಳು ತಿಳಿಯವಾದ್ದರಿಂದ ಅದನ್ನು ಮಹಿಮೆ ಅನ್ನುತ್ತಿದ್ದೀಯ. ನಮ್ಮ ಬಳಿ ಅಂತಹ ಮಹತ್ವಗಳು ಯಾವವು ಇಲ್ಲ. ನಿನ್ನ ಕೈಲಾದರೆ ನನ್ನ

ಭಕ್ತನಿಗೆ ಜ್ಞಾನ ತಿಳಿಸಿ ನಿಮ್ಮ ಭಕ್ತನಂತೆ ಬದಲಾಯಿಸಿಕೋ ಅದೇ ಮಹಿಮೆ ಯೆಂದು ಅಂದುಕೊಳ್ಳುತ್ತೇನೆ ನಾನು ಯಾರನ್ನು ಈ ಕೆಲಸ ಮಾಡೆಂದು ಹೇಳುವುದಿಲ್ಲ ಅವರು ಮಾಡುತ್ತಿದ್ದರೆ ಬೇಡವೆಂದು ಹೇಳುವುದಿಲ್ಲ. ನನ್ನ ಕೆಲಸವೆಲ್ಲವೂ ಧರ್ಮಯುಕ್ತವಾದ ಜ್ಞಾನ ತಿಳಿಸುವುದು ಹೊರತು ಪಡಿಸಿ ಏನೂ ಇಲ್ಲ. ನಿಮಗೆ ನಮ್ಮ ಪದ್ಧತಿ ಇಷ್ಟವಾಗದಿದ್ದರೆ ನೀವು ಬರಬೇಡಿ, ನಿಮ್ಮ ತಂದೆಯನ್ನು ಕಳುಹಿಸಬೇಡಿ ಅದು ಬಿಟ್ಟು ನಿಮ್ಮದು ಭಕ್ತಿಯಲ್ಲವೆಂದರೆ ನಿಮ್ಮದು ಭಕ್ತಿನಾ ಎಂದು ದುಪ್ಪಟಿಬಿಚ್ಚಬೇಕಾಗಿ ಬರುತ್ತದೆ.

ಹೀಗೆ ವಾದಿಸಿಕೊಂಡವರು ಯಾರ ದಾರಿಯಲ್ಲಿ ಅವರು ಹೋದರು. ಸ್ವಲ್ಪ ದಿನಗಳಿಗೆ ಆತನು ಬಂದನು. ಆಗ ಆತನು ಮತ್ತೆ ಆಶ್ರಮಕ್ಕೆ ಗುರುವಿನ ಬಳಿಗೆ ಹೋಗದಂತೆ ಎಲ್ಲ ಬಂಧನಗಳಲ್ಲಿ ಬಂಧಿಸಿದರು. ಆತನು ಆಗ ಹೀಗೆಂದನು. 'ನಾನು ನಿಮಗೆ ಏನು ಕೆಲಸಕ್ಕೆ ಬರುವವನಲ್ಲ ನಾನು ಇಲ್ಲಿ ಮಾಡಬೇಕಾದದ್ದು ಏನೂ ಇಲ್ಲ ವೃದ್ಧಾಪ್ಯದಲ್ಲಾದರೂ ಜ್ಞಾನ ತಿಳಿದುಕೊಳ್ಳೋಣ ವೆಂದರೆ ನನ್ನನ್ನು ಎಲ್ಲಿಗು ಹೋಗಬೇಡವೆನ್ನುತ್ತೀರೇನು"

ಆಗ ಹೆಂಡತಿ ಅಂದಳು "ನೀನು ಎಲ್ಲಿಗೂ ಹೋಗಬೇಡ. ನಿನಗೆ ಯಾವ ಜ್ಞಾನವೂ ಬೇಡ ಸುಮ್ಮನೆ ಮನೆಯಲ್ಲಿರು."

ಹೀಗೆ ಎಷ್ಟೋಜನ ಎಷ್ಟೋ ಇಕ್ಕಟ್ಟುಗಳನ್ನು ಎದುರಿಸಬೇಕಾಗುತ್ತದೆ. ಆದ್ದರಿಂದ ಈ ಪ್ರಪಂಚ ರಂಗಸ್ಥಳದ ಮೇಲೆ ಜೀವನವೆಂಬ ನಾಟಕದಲ್ಲಿ ಬಳಲಿ ಹೋದವರು ನಾವು ಇಲ್ಲಿಯವರೆಗು ಆಡುತ್ತಿರುವುದು ನಿಜವಾದದ್ದಲ್ಲ ಕೇವಲ ನಾಟಕವೇಯೆಂದು ತಿಳಿದು ಅದರ ಮೇಲೆ ವ್ಯಾಮೋಹ ಕಡಿಮೆ ಮಾಡಿಕೊಂಡರೂ, ಆ ವಿಷಯ ಪಕ್ಕದವರಿಗೆ ತಿಳಿಯದೇ ಅನೇಕ ಆತಂಕಗಳು ಕಲ್ಪಿಸುತ್ತಿದ್ದಾರೆ. ಯಾರ ಆತಂಕಗಳು ಅವರಿಗೆ ತಿಳಿದಿರುತ್ತದೆ. ಆದ್ದರಿಂದ ಪಾತ್ರದಾರಿಗಳಾದ ಓ ಜೀವಿಗಳೆ ಈ ನಾಟಕಕ್ಕೆ ಸೂತ್ರಧಾರಿ ಯಾರೋ ತಿಳಿದುಕೊಳ್ಳಿ.

# ಬೇಟೆ – ಏಳು ಮೀನುಗಳು

ಒಂದಾನೊಂದು ಕಾಲದಲ್ಲಿ ಒಬ್ಬ ರಾಜ, ಆ ರಾಜನಿಗೆ ಐದು ಜನ ಗಂಡು ಮಕ್ಕಳು. ಐದು ಜನ ಗಂಡು ಮಕ್ಕಳು ಬೇಟೆಗೆ ಹೋದರು. ಏಳು ಮೀನುಗಳು ಹಿಡಿದರು. ಆ ಏಳು ಮೀನುಗಳಲ್ಲಿ ಆರು ಮಾತ್ರ ಒಣಗಿಹೋಗಿವೆ. ಒಂದು ಮಾತ್ರ (ಸತ್ತುಹೋಗಿಲ್ಲ) ಒಣಗಿ ಹೋಗಿಲ್ಲ. ಅದು ಏಕೆ (ಸತ್ತುಹೋಗಿಲ್ಲ) ಒಣಗಿ ಹೋಗಿಲ್ಲ ಎಂದರೆ ಅದಕ್ಕೆ ಒಂದು ಕಾರಣವಿದೆ. ಹುಲ್ಲಿನ ಬಣವಿ ಅಡ್ಡವಿದೆ ಆದ್ದರಿಂದ ನಾನು ಒಣಗಿ ಹೋಗಲಿಲ್ಲವೆಂದಿತಂತೆ ಆ ಮೀನು. ಇದು ಮಕ್ಕಳ ಕಥೆಯಂತೆ ಇದೆಯಲ್ಲವೆ! ಇದು ಮಕ್ಕಳ ಕಥೆಯೆ. ಪೂರ್ವದಲ್ಲಿ ಹಿರಿಯರು ಇಂತಹ ಕಥೆಗಳೆ ಮಕ್ಕಳಿಗೆ ಹೇಳುತ್ತಿದ್ದರು. ಈಗಾದರೆ ಎಷ್ಟೋ ಬದಲಾವಣೆ ಬಂದಿದೆ. ಇಂತಹ ಕಥೆಗಳು ಇಲ್ಲವೆಂದುಕೊಳ್ಳಿ.

ಪೂರ್ವದಲ್ಲಿ ಮಕ್ಕಳ ಭವಿಷ್ಯತ್ತನ್ನು ಜ್ಞಾನ ಮಾರ್ಗದಿಂದ ತುಂಬ ಬೇಕೆಂಬ ಭಾವನೆಯಿಂದ ಹಿರಿಯರು ಎಷ್ಟೋ ಜ್ಞಾನಾರ್ಥವನ್ನು ಕೊಡುವ ಇಂತಹ ಕಥೆಗಳನ್ನು ಮಕ್ಕಳಿಗೆ ಹೇಳುತ್ತಿದ್ದರು. ಮೇಲಿನ ಕಥೆಯಲ್ಲಿ ಏನು ಜ್ಞಾನವಿದೆಯೆಂದು ಅಂದುಕೊಳ್ಳಬೇಡಿ. ಅದರಲ್ಲಿ ಜೀವಬ್ರಹ್ಮೈಕ್ಯಸಂಧಾನವಾಗುವ ವಿಧಾನ ಒಳಪಟ್ಟಿದೆಯೆಂದು ತಿಳಿಯಬೇಕು. ಉದಾಹರಣೆಗೆ ಈ ಕಥೆಯಲ್ಲಿ ಮೊದಲ ಪದವನ್ನು ತೆಗೆದುಕೊಳ್ಳೋಣ. "ಒಂದಾನೊಂದು" ಎಂಬ ಪದ ಅರ್ಥವನ್ನು ತಿಳಿಸುವುದು ಅಥವಾ ಭಾವವನ್ನು ತಿಳಿಸುವುದು. ತೋಯುವುದು ಎಂದರೆ ನೀರು ಎಂಬ ಮಾತಿನಲ್ಲಿ ತೋಯುವುದೆಂದರೆ ನೀರು ಎನ್ನುವಹಾಗೆ ಮಾಡುವುದು ಎಂದರೆ ನಮಗೆ ಒಂದು ವಸ್ತುವೊಂದರ ವಿವರ ತಿಳಿಯದಿರುವಾಗ ಎಂದರೆ ಒಂದಾನೊಂದು ಎಂದು ಎರಡು ಮೂರು ಬಾರಿ ಅನ್ನುತ್ತೇವಾಗಲಿ ಅದರ ವಿವರ ಹೇಳಲಾರೆವು. ಹಾಗೇ ಮೇಲಿನ ಕಥೆಯಲ್ಲಿ ಒಂದಾನೊಂದು ಅನ್ನುವುದರಲ್ಲಿ ಹೇಳದಿರುವುದು ಎನ್ನುವ ಭಾವ ತಿಳಿಯುತ್ತಿದೆ. ಕೊನೆಗೆ ಒಬ್ಬ ರಾಜ ಅಂದಿದ್ದಾರೆ. ಆದರೂ ರಾಜ ಅಲ್ಲ. ಆದರೆ ರಾಜ ಎಂದು ಹೇಳಬೇಕಾಗಿ ಬಂದಿದೆ ಎಂದು ಮೊದಲಿಗೇ ತಿಳಿಯುತ್ತಿದೆ. ನೋಡಲಾರೆವು ಆದರೇ ಎದುರಿಗೇ ಇದೆ. ಭಾಷೆಗೆ ಸಿಗದಿರುವುದು ಆದರೆ ಎಲ್ಲಾ ವ್ಯಾಪಿಸಿರುವುದಾದ

**"ಪರಮಾತ್ಮ"ನನ್ನು ಗುರುತಿಸುವುದಕ್ಕೆ ಇಲ್ಲಿ "ಒಂದಾನೊಂದು ಕಾಲದಲ್ಲಿ ಒಬ್ಬ ರಾಜ" ಎಂದು ಹೇಳಲಾಗಿದೆ.** ಶರೀರದಲ್ಲಿ ಯೋಗವಾಚರಿಸುವು ದನ್ನು **"ಬೇಟೆ"** ಎಂದಿದ್ದಾರೆ. ಬೇಟೆಯಲ್ಲಿ ಬೇಟೆಯಾಡಬೇ ಕಾದ ನೀರಿನಲ್ಲಿನ ಚಂಚಲವಾದ ಮೀನುಗಳನ್ನು ನಮ್ಮ ಶರೀರದೊಳಗಿನ ಏಳು ನಾಡಿಕೇಂದ್ರಗಳಾಗಿ ಅಂದರೆ ಸಪ್ತ ಸ್ಥಾನಗಳಾಗಿ ಹೋಲಿಸಿ ಏಳು ಮೀನುಗಳೆಂದಿದ್ದಾರೆ. ಯೋಗವಾಚರಿಸಿದಾಗ ಶರೀರದಲ್ಲಿನ ಆರು ನಾಡೀ ಕೇಂದ್ರಗಳು ಸ್ತಂಭಿಸಿ ಹೋದರೂ ಕೊನೆಯ ಏಳನೇ ಕೇಂದ್ರ ಮಾತ್ರ ಚೈತನ್ಯದಿಂದಿದ್ದು ಸ್ತಂಭಿಸದಂತಿರುವುದು. ಆದ್ದರಿಂದ ಆರು ಮೀನುಗಳು ಒಣಗಿ ಹೋದರೂ ಒಂದು ಮೀನು ಮಾತ್ರ ಒಣಗಿ ಹೋಗಲಿಲ್ಲವೆಂದಿದ್ದಾರೆ.

ಇದು ಎಷ್ಟೋ ಜ್ಞಾನಪರವಾದ ಕಥೆ. ಜೀವವು ಮೋಕ್ಷವನ್ನು ಹೊಂದುವುದಕ್ಕೆ ಎರಡೇ ಮಾರ್ಗಗಳಿವೆ. ಅವುಗಳೆ ಒಂದು ಕರ್ಮಯೋಗ ಎರಡನೆಯದು ಜ್ಞಾನಯೋಗ. ಈ ಕಥೆ ಪೂರ್ತಿ ಜ್ಞಾನಯೋಗ ಸಂಬಂಧ ವಾದದ್ದು. ಯೋಗ ಸಾಧನೆ ಮಾಡಿ ಯೋಗವಾಚರಿಸಿದರೂ ಜೀವಿಯು ತಕ್ಷಣವೆ ಮೋಕ್ಷ ಹೊಂದುವುದಿಲ್ಲ. ಮೋಕ್ಷ ಹೊಂದಬೇಕೆಂದರೆ ಕರ್ಮ ಪೂರ್ತಿಯಾಗಿ ಸುಟ್ಟು ಹೋಗಬೇಕು. ಕರ್ಮ ಪೂರ್ತಿಯಾಗಿ ಸುಟ್ಟುಹೋಗಬೇ ಕೆಂದರೆ ಒಂದು ಬಾರಿ ಯೋಗವಾಚರಿಸಿದಷ್ಟು ಮಾತ್ರಕ್ಕೆ ಸರಿಹೋಗದು. ಸ್ವಲ್ಪ ಹೊತ್ತು ಯೋಗವಾಚರಿಸಿದರು ಸ್ವಲ್ಪ ಕರ್ಮ ಮಾತ್ರ ಸುಟ್ಟುಹೋಗುವುದು. ಹಾಗೆ ಎಷ್ಟೋ ಬಾರಿ, ಎಷ್ಟೋ ಕಾಲ ಯೋಗವಾಚರಿಸಿ ದಾಗ ಪೂರ್ತಿ ಕರ್ಮ ಸುಟ್ಟುಹೋಗುವುದು. ಹಾಗೆ ಕರ್ಮ ನಿಶ್ಶೇಷವಾಗಿ ಸುಟ್ಟುಹೋಗುವುದಕ್ಕೆ ಒಂದು ಜನ್ಮ ಆಗಬಹುದು ಇಲ್ಲವೆ ಎರಡು ಜನ್ಮಗಳು ಬೇಕಾಗಬಹುದು ಇನ್ನೂ ಹೆಚ್ಚಾಗಿ ಬೇಕಾಗಬಹುದು. ಅದು ಕರ್ಮ ಇರುವಿಕೆಯನ್ನು ಅನುಸರಿಸಿ ಇರುತ್ತದೆ.

ಇಲ್ಲಿ ಮೇಲಿನ ಕಥೆಯಲ್ಲಿ ವಿಶೇಷವೇನೆಂದರೆ ಕಥೆ ಎರಡು ಭಾಗಗಳಾಗಿ ಇದೆ. ಒಂದು ಭಾಗದಲ್ಲಿ ಬೇಟೆಯಾಡಲು ಹೋಗಿ ಮೀನುಗಳು ಹಿಡಿಯುವುದು

ಅವು ಆರು ಒಣಗಿ ಒಂದು ಮಾತ್ರ ಒಣಗದೆ ಇರುವುದು ನಡೆದಿದೆ. ಎರಡನೆ ಭಾಗದಲ್ಲಿ ಆ ಒಂದು ಮೀನು ಏಕೆ ಒಣಗಲಿಲ್ಲ ಅನ್ನುವುದಕ್ಕೆ ವಿವರವಿದೆ. ಎರಡನೇ ಭಾಗದಲ್ಲಿನ ವಿವರ ಮೀನು ಒಣಗದೇ ಇರುವುದಕ್ಕೆ ಕಾರಣ ಹುಲ್ಲಿನ ಬಣಿವೆ ಅಡ್ಡವಿದೆ ಬಿಸಿಲು ಬೀಳಲಿಲ್ಲ. ಆದ್ದರಿಂದ ಮೀನು ಒಣಗಲಿಲ್ಲವೆಂದಿದ್ದಾರೆ. ಹುಲ್ಲಿನ ಬಣಿವೆ ನೀನು ಏಕೆ ಅಡ್ಡ ಬಂದಿದ್ದೀಯ ಎಂದು ಕೇಳಿದರೆ ಅದು ಆಕಳು ಮೇಯಲಿಲ್ಲವೆಂದು ಹೇಳಿತಂತೆ, ಆಕಳು ನೀನೇಕೆ ಮೇಯಲಿಲ್ಲವೆಂದು ಕೇಳಿದರೆ ಕೆಲಸದವನು ಮೇವು ಹಾಕಲಿಲ್ಲವೆಂದು ಹೇಳಿತಂತೆ, ಕೆಲಸದವನನ್ನು ಏಕೆ ಮೇವು ಹಾಕಲಿಲ್ಲವೆಂದು ಕೇಳಿದರೆ ಅವ್ವ ಅನ್ನ ಇಡಲಿಲ್ಲವೆಂದು ಹೇಳಿದನಂತೆ, ಅವ್ವನನ್ನು ಏಕೆ ಅನ್ನ ಇಡಲಿಲ್ಲವೆಂದು ಕೇಳಿದರೆ ಹುಡುಗನು ಅಳುತ್ತಿದ್ದಾನೆ ಆದ್ದರಿಂದ ಇಡಲಿಲ್ಲವೆಂದಳಂತೆ. ಹುಡುಗ ನೀನು ಏಕೆ ಅಳುತ್ತಿದ್ದೀ ಎಂದು ಕೇಳಿದರೆ ನನಗೆ ಇರುವೆ ಕಚ್ಚಿದೆಯೆಂದು ಹೇಳಿದನಂತೆ, ಕೊನೆಗೆ ಇರುವೆಯನ್ನು ನೀನೇಕೆ ಹುಡುಗನನ್ನು ಕಚ್ಚಿದ್ದೀಯ ಎಂದು ಕೇಳಿದರೆ ನನ್ನ ಹುತ್ತದಲ್ಲಿ ಬೆರಳಿಟ್ಟರೆ ನಾನು ಕಚ್ಚಲ್ಲವೆ ಎಂದಿತಂತೆ. ಇಲ್ಲಿ ಇರುವೆ ಇನ್ನೊಂದರ ಮೇಲೆ ಹೇಳದೇ ಇದಕ್ಕೆಲ್ಲದಕ್ಕು ಕಾರಣ ನಾನೇ ಎಂದು ಹೇಳಿ ಇನ್ನೊಬ್ಬರನ್ನು ಕೇಳದಂತೆ ಕಥೆ ಮುಗಿಯುವಂತೆ ಮಾಡಿದೆ.

ಮೊದಲನೇ ಭಾಗದ ಕಥೆಯಲ್ಲಿ ರಾಜ, ಮಕ್ಕಳು, ಬೇಟೆ, ಮೀನುಗಳು ಕೊನೆಯ ಮೀನು ಏನೆಂದಿದೆಯೆಂದು ತಿಳಿದುಕೊಂಡಿದ್ದೇವೆ. ಎರಡನೆ ಭಾಗವಾದ ಕಥೆಯಲ್ಲಿ ಹುಲ್ಲಿನ ಬಣವೆ, ಆಕಳು, ಕೆಲಸದವನು, ಅಜ್ಜಿ, ಹುಡುಗ, ಇರುವೆ, ಇರುವೆ ಹುತ್ತವನ್ನು ಕುರಿತು ತಿಳಿದುಕೊಳ್ಳಬೇಕು. ಮುಖ್ಯ ಸಾರಾಂಶ ಈ ಎರಡನೇ ಭಾಗದಲ್ಲಿಯೇ ಇದೆ. ಆದ್ದರಿಂದ ಜಾಗ್ರತೆಯಿಂದ ತಿಳಿದುಕೊಳ್ಳೋಣ. ಕಥೆಯ ಮೊದಲನೆ ಭಾಗದಲ್ಲಿ ಯೋಗ ವಿಧಾನ ಮಾತ್ರ ತಿಳಿಸಲಾಗಿದೆ. ಕೆಲವರು ಯೋಗಾಭ್ಯಾಸ ಮಾಡಿ ಯೋಗ ಸಾಧಿಸಿ ಆತ್ಮದರ್ಶನ ಮಾಡಿಕೊಂಡ ನಂತರವೂ ಸಹ ನನಗೆ ಮೋಕ್ಷ ಬರಲಿಲ್ಲವೆ! ಮೇಲಾಗಿ ಪ್ರಪಂಚ ವಿಷಯಗಳು ನನ್ನನ್ನು ಬಾಧಿಸುತ್ತಲೆ ಇವೆಯೆಂದು ಅಂದುಕೊಳ್ಳುವರು. ತಮ್ಮ ಯೋಗವೇ

ತಪ್ಪೇನೋ ಎಂದು ಅಂದುಕೊಳ್ಳುವುದು ಸಹ ನಡೆಯುತ್ತಿದೆ. ಹಾಗೆಂದುಕೊಂಡು ಯೋಗಸಾಧನೆಯಲ್ಲಿ ಹಿಂದೆಜ್ಜೆ ಹಾಕುವುದು ಸಹ ನಡೆಯುತ್ತಿದೆ. ಆದ್ದರಿಂದ ಪರಿಪೂರ್ಣ ಜ್ಞಾನವಿರುವ ದಿನವೇ ಎಲ್ಲದಕ್ಕು ಸಮಾಧಾನ ಇರುವುದು. ಆದ್ದರಿಂದ ಯೋಗಾಭ್ಯಾಸವನ್ನು ಒಂದು ಭಾಗವಾಗಿ, ನಂತರ ಪೂರ್ತಿ ಕರ್ಮ ಸುಟ್ಟುಹೋಗುವ ವಿಧಾನವನ್ನು ಮತ್ತೊಂದು ಭಾಗವಾಗಿ ಮೇಲಿನ ಕಥೆಯಲ್ಲಿ ತಿಳಿಸಲಾಗಿದೆ.

ಯೋಗವನ್ನು ಸಾಧಿಸಿ ಆತ್ಮದರ್ಶನ ಮಾಡಿಕೊಂಡ ಕೂಡಲೇ 'ಮೋಕ್ಷ' ಏಕೆ ಬರಲಿಲ್ಲ? ಎಂಬ ಪ್ರಶ್ನೆಗೆ ಮುಖ್ಯವಾಗಿ ಇಲ್ಲಿ ಉತ್ತರವಿದೆ. ಒಬ್ಬ ಜೀವಿಯು ಮೋಕ್ಷ ಹೊಂದಬೇಕೆಂದರೆ ಕರ್ಮಪೂರ್ತಿಯಾಗಿ ಮುಗಿದು ಹೋಗಿರಬೇಕು. ಕರ್ಮ ಮುಗಿದುಹೋಗುವುದಕ್ಕೆ ಕಂಡುಕೊಂಡ ಉಪಾಯವೇ ಯೋಗ. ಯೋಗವೆನ್ನುವ ವಿಧಾನದಲ್ಲಿ ಕರ್ಮ ಸುಟ್ಟುಹೋಗುವುದಕ್ಕೆ ಜ್ಞಾನಾಗ್ನಿ ಎನ್ನುವುದು ಏರ್ಪಟ್ಟು ಕರ್ಮವನ್ನು ಸುಡುತ್ತಾ ಹೋಗುವುದು. ಒಲೆಯ ಮುಂದೆ ಕುಳಿತುಕೊಂಡು ಕಟ್ಟಿಗೆಗಳನ್ನು ಇಡುವವರೆಗು ಒಲೆಯಲ್ಲಿ ಅಗ್ನಿ ಇರುವುದು. ಹಾಗೆ ಯೋಗ ಆಚರಿಸಿದಷ್ಟು ಕಾಲ ಜ್ಞಾನಾಗ್ನಿಯಿಂದ ಕರ್ಮ ಸುಡುವುದು. ಯೋಗವಾಚರಿಸದಿರುವಾಗ ಕರ್ಮ ಸುಡುವುದಿಲ್ಲ. ಕರ್ಮ ಅನೇಕ ವಿಧಗಳಾಗಿ ನಮಗೆ ಸಂಕ್ರಮಿಸಿರುತ್ತದೆ. ಆದ್ದರಿಂದ ಆ ಕರ್ಮವನ್ನು ಸಣ್ಣ ದೊಡ್ಡ ಹುಲ್ಲಿನ ಕಡ್ಡಿಗಳಂತೆ, ಎಲೆಗಳಂತೆ, ಬಳ್ಳಿಗಳಂತೆ ಇರುವ ಹುಲ್ಲಿನ ಬಣವೆಯಂತೆ ಹೋಲಿಸಿ ಹೇಳಿದ್ದಾರೆ.

ಜೀವಾತ್ಮನು ಶರೀರದಲ್ಲಿ ನಿವಾಸಿಸುವುದಕ್ಕೆ ಚೈತನ್ಯಕೊಡುವುದು ಏಳನೇ ಕೇಂದ್ರವಾದ ಸಹಸ್ರಾರ, ಅದನ್ನೇ ಏಳನೆ ಮೀನಿನಂತೆ ಹೇಳಿದ್ದಾರೆ. ಈ ಕೇಂದ್ರದಲ್ಲಿಯೆ ನಮ್ಮ ಕರ್ಮ ನಿಲ್ಲುವಿಕೆ ಇದೆ. ಈ ಕೇಂದ್ರವೇ ಶರೀರವನ್ನು ಸಜೀವವಾಗಿ ಕದಲಿಸುತ್ತದೆ. ಈ ಕೇಂದ್ರದಲ್ಲಿ ಕರ್ಮ ಇಲ್ಲದಿರುವಾಗ ಮಾತ್ರ ಚೈತನ್ಯ ನಿಂತುಹೋಗುವುದು. ಕರ್ಮ ಇರುವವರೆಗು ಹಾಗೇ ಇರುತ್ತದೆ. ಆದ್ದರಿಂದ ಮೀನು ಮೀನು ನೀನು ಏಕೆ ಒಣಗಲಿಲ್ಲವೆಂದು ಕೇಳಿದರೆ ನನಗೆ

ಹುಲ್ಲಿನ ಬಣವೆ ಅಡ್ಡಬಂದಿತೆಂದು ಹೇಳಿದೆಯಂತೆ. ಇದನ್ನು ಅನುಸರಿಸಿ ನೋಡಿದರೆ ಈ ಕಥೆಮೂಲಕವಾಗಿ ಕರ್ಮ ಎನ್ನುವ ಹುಲ್ಲಿನ ಚಿಗುರುಗಳು ಇರುವವರೆಗು ಜೀವಾತ್ಮನಿಗೆ ಮೋಕ್ಷವಿಲ್ಲ ಎಂದು ತಿಳಿಯುತ್ತದೆ. ಹುಲ್ಲಿನ ಚಿಗುರುಗಳು ಇಲ್ಲದಂತೆ ಹೋಗಬೇಕೆಂದರೆ ಕರ್ಮ ಸುಟ್ಟುಹೋಗಬೇಕೆಂದು ಅರ್ಥ. ಇದಕ್ಕೆ ಭಗವದ್ಗೀತೆ 4ನೇ ಅಧ್ಯಾಯ 37ನೇ ಶ್ಲೋಕದಲ್ಲಿ "*ಯಥೈಧಾಂಸಿ ಸಮಿದ್ಧೋಗ್ನಿಃ ಭಸ್ಮಸಾತ್ಕುರು ತೇರ್ಜುನ! ಜ್ಞಾನಾಗ್ನಿ ಸರ್ವ ಕರ್ಮಾಣಿ ಭಸ್ಮಸಾತ್ಕುರುತೇ ತಥಾ*" ಎಂದಿದ್ದಾರೆ. ಯಾವ ವಿಧವಾಗಿ ಅಗ್ನಿಗೆ ಕಟ್ಟಿಗೆಗಳು ಸುಟ್ಟು ಹೋಗುವವೋ ಅದೇ ವಿಧದಲ್ಲಿ ಜ್ಞಾನವೆನ್ನುವ ಅಗ್ನಿಯಿಂದ ಸರ್ವಕರ್ಮಗಳು ಸುಟ್ಟುಹೋಗುವವು.

ಕರ್ಮಗಳನ್ನು ಸುಡುವ ಜ್ಞಾನಾಗ್ನಿಯನ್ನು ಈ ಕಥೆಯಲ್ಲಿ ಆಕಳಂತೆ ಹೋಲಿಸಿ ಹೇಳಿದ್ದಾರೆ. 'ಕರ್ಮ' ಎನ್ನುವ ಹುಲ್ಲು ಮುಗಿದುಹೋದಾಗ ಅದನ್ನು ಇಲ್ಲದಂತೆ ತಿಂದುಹಾಕುವ 'ಜ್ಞಾನಾಗ್ನಿ' ಆಕಳಂತೆ ಬದಲಾಗಿದೆ. ಆಕಳು ಮೇಯದೆ ಹೋದರೆ ಹುಲ್ಲು ಮುಗಿದು ಹೋಗುವುದಿಲ್ಲ. ಆದ್ದರಿಂದ ಹುಲ್ಲಿನ ಬಣವೆ ನೀನೇಕೆ ಅಡ್ಡ ಬಂದಿದ್ದೀಯ ಎಂದು ಕೇಳಿದರೆ ಆಕಳು ನನ್ನನ್ನು ಮೇಯಲಿಲ್ಲ ವೆಂದು ಹೇಳಿದೆಯಂತೆ. ದಿನಕ್ಕೆ ಎರಡು ಮೂರು ಹೊತ್ತಾದರೂ ಆಕಳಿಗೆ ಮೇವನ್ನು ಇಟ್ಟರೆ ಮೇವು ಖಾಲಿಯಾಗುತ್ತದೆ. ಹಾಗಲ್ಲದೆ ಎರಡು ಮೂರು ದಿನಗಳಿಗೊಂದು ಬಾರಿಯೊ, ವಾರಕ್ಕೊಂದು ಬಾರಿಯೊ ಮೇವು ಹಾಕಿದರೆ ಆಕಳು ಹೇಗಿರುತ್ತದೊ ಯೋಚಿಸಿರಿ. ಅಸಲು ಹುಲ್ಲನ್ನು ತಿನ್ನುವ ಆಕಳೆ ಇಲ್ಲದವರು ಲಕ್ಷ ಸಂಖ್ಯೆಯಲ್ಲಿ ಕೋಟಿಸಂಖ್ಯೆಗಳಲ್ಲಿದ್ದು ಅವರಲ್ಲಿ ಯಾರೊಬ್ಬರು ಜ್ಞಾನಾಗ್ನಿ ಎನ್ನುವ ಆಕಳನ್ನು ಹೊಂದಿರುವವರಿರುವುದು ಅಪರೂಪ. ಇರುವವರು ಸಹ ಸರಿಯಾಗಿ ಮೇಯಿಸುವ ಸ್ಥಿತಿಯಲ್ಲಿ ಇಲ್ಲವೆಂದು ಈ ಕಥೆಯಲ್ಲಿ ತಿಳಿಯುತ್ತಿದೆ. ಹಾಗೆ ಏಕೆ ಮೇಯಿಸದೆ ಹೋಗುತ್ತಿದ್ದಾರೆಂದರೆ? ಇಲ್ಲಿ ಯೋಗಸಾಧನೆ ಇರುವಾಗಲೆ ಕರ್ಮಸುಡುವುದಕ್ಕೆ ಅಂದರೆ ಆಕಳು ಹುಲ್ಲನ್ನು ಮೇಯುವುದಕ್ಕೆ ಅವಕಾಶವಿದೆ. ಯೋಗ ತಿಳಿದು ಸಹ ಬಹಳ ಜನ ಸಾಧನೆ ಮಾಡಲಾಗದೆ ಹೋಗುತ್ತಿದ್ದಾರೆ. ಸಾಧನೆ ಅನ್ನುವುದೇ ಇಲ್ಲಿ ಕೆಲಸ. ಆ ಕೆಲಸವನ್ನೇ

'ಕೆಲಸದವನಂತೆ' ಕಥೆಯಲ್ಲಿ ಹೇಳಲಾಗಿದೆ. ಆಕಳು ನೀನೇಕೆ ಹುಲ್ಲು ಮೇಯಲಿಲ್ಲ ಎಂದು ಕೇಳಿದರೆ ಕೆಲಸದವನು ಹುಲ್ಲು ಹಾಕಲಿಲ್ಲವೆಂದು ಹೇಳಿದೆಯಂತೆ. ಅಂದರೆ ಸರಿಯಾಗಿ ಸಾಧನೆ ಮಾಡಲಿಲ್ಲವೆಂದು ಅರ್ಥ.

ಹಾಗೆ ಸಾಧನೆ ಮಾಡದೇ ಹೋಗುವುದಕ್ಕೆ ಸಾಧನೆಗೆ ಅಡಚಣೆಗಳು ಎಷ್ಟೋ ಇವೆ. ಪ್ರಕೃತಿ ಜನಿತವಾದ ಮಾಯೆ ಅಡಚಣೆಗಳನ್ನು ಕಲ್ಪಿಸುತ್ತಲೆ ಇರುತ್ತದೆ. ಅದರ ಅಡಚಣೆಗಳನ್ನು ಲೆಕ್ಕಮಾಡದವನೇ ಯೋಗಸಾಧನೆ ಆಚರಿಸಬಲ್ಲನು. ಹಾಗಲ್ಲದೆ ಅದು ಅನುಕೂಲದಲ್ಲಿ ಇಲ್ಲದಿರುವಾಗ ಯೋಗ ಮಾಡುತ್ತೇವೆಂದುಕೊಂಡರೆ ಆಗುವುದಿಲ್ಲ. ಮಾಯೆ ಹೊರಗಿನ ಪ್ರಪಂಚದಲ್ಲಿನ ಚಿತ್ರವಿಚಿತ್ರ ಸಂಘಟನೆಗಳನ್ನು ತಂದು ಇಡುತ್ತಲೇ ಇರುತ್ತದೆ. ಮಾಯೆಯನ್ನು ಅಜ್ಜಿಯಾಗಿ ಹೋಲಿಸಿ ತೃಪ್ತಿಯನ್ನು ಅನ್ನಕ್ಕೆ ಹೋಲಿಸಿ ಹೇಳಿದ್ದಾರೆ. ಕೆಲಸದವನೆ ನೀನು ಆಕಳಿಗೆ ಹುಲ್ಲು ಏಕೆ ಹಾಕಲಿಲ್ಲವೆಂದು ಕೇಳಿದರೆ ಅಜ್ಜಿ ಅನ್ನ ಇಡಲಿಲ್ಲವೆಂದು ಹೇಳಿದನಂತೆ.

ಇಲ್ಲಿ ಅಜ್ಜಿ ನೀನು ಏಕೆ ಅನ್ನ ಇಡಲಿಲ್ಲವೆಂದು ಕೇಳಿದರೆ ಸಮಾಧಾನ ವೇನೋ ನೋಡೋಣ. ಜೀವಿಯು ಕರ್ಮಾನುಸಾರ ಕಷ್ಟಸುಖಗಳನ್ನು ಅನುಭವಿಸುತ್ತಲೆ ಇರುವನು. ಎಡಬಿಡದೆ ಅವುಗಳಿಂದ ಬಾಧೆ ಬೀಳುತ್ತಲೇ ಇರುವನು. ಜೀವಿಯು ಬಾಧೆಪಡುವುದಕ್ಕೆ ಕರ್ಮ ಆಚರಣೆಗೆ ಶರೀರದೊಳಗಿನ ಉಳಿದ ಭಾಗಗಳನ್ನು ಸರಿಯಾದ ರೀತಿಯಲ್ಲಿ ಸ್ಪಂದಿಸುವಂತೆ ಮಾಡುವುದೇ ಮಾಯೆ. ಕರ್ಮ ಅನುಭವವಿರುವವರೆಗು ಮಾಯೆಗೆ ಕೆಲಸ ಪೂರ್ತಿ ಇದ್ದಂತೆ. ಜೀವಯೆಂಬ ಹುಡುಗನು ಕರ್ಮ ಅನುಭವಿಸುತ್ತ ಇರುವವರೆಗು ಮಾಯೆ ಅವನ ಹಿಂದೆಯೇ ಸ್ಪಂದಿಸುತ್ತಿರುತ್ತದೆ. ಆದ್ದರಿಂದ ಹುಡುಗನು ಅಳುತ್ತಿದ್ದಾನೆ ಅವನಹಿಂದೆ ನಾನಿದ್ದೇನೆ. ಕೆಲಸದವನಿಗೆ ಅನ್ನ ಇಡುವಷ್ಟು ತಾಳ್ಮೆ ನನಗಿಲ್ಲವೆಂದು ಅವ್ವನ ಸಮಾಧಾನ. ಅವ್ವನ ಸಮಾಧಾನದ ನಂತರ ಹುಡುಗಾ ನೀನೇಕೆ ಅಳುತ್ತಿದ್ದೀಯೆನ್ನುವ ಪ್ರಶ್ನೆ ಮತ್ತೊಂದು ಇದೆ. ಅದಕ್ಕೆ ಆತನ ಸಮಾಧಾನವೇನೊ ನೋಡೋಣ.

ಜೀವಿಯು ನಿರಂತರ ಕಷ್ಟ ಸುಖಗಳು ಅನುಭವಿಸುತ್ತಿರುವಾಗ ಅವುಗಳಲ್ಲಿಯೆ ನಿತ್ಯವೂ ಜಿಗುಪ್ಸೆ ಪಡುತ್ತಿದ್ದಾನೆ. ಕಷ್ಟಸುಖಗಳು ಅನುಭವಗಳಿಗೆ ಆಲೋಚನೆಗಳು ಪ್ರಧಾನಗಳು ಅವುಗಳಿಂದಲೆ ಕೊನೆಗೆ ಕಾರ್ಯ, ಕಾರ್ಯ ಗಳಲ್ಲಿಯೇ ಕಷ್ಟಗಳು ಸುಖಗಳಿವೆ. ಆಲೋಚನೆಗಳ ನಿಲಯ ನಮ್ಮ ತಲೆಯಲ್ಲಿನ ಗುಣಭಾಗವೆ ಆ ಆಲೊಚನೆಗಳಿಂದಲೆ ಕಷ್ಟಗಳು ಏರ್ಪಡುತ್ತಿವೆ. ಯೋಚನೆಗಳೆ ಇರುವೆಗಳಾದರೆ ತಲೆಯಲ್ಲಿನ ಗುಣಭಾಗವೇ ಇರುವೆಗಳ ಹುತ್ತ, ಜೀವಿಯು ಯಾವಾಗಲೂ ಇರುವೆಗಳ ಹುತ್ತದಿಂದಲೆ ಬಾಧೆ ಪಡುತ್ತಿದ್ದಾನೆ. ಆದ್ದರಿಂದ ಹುಡುಗನನ್ನು ನೀನೇಕೆ ಅಳುತ್ತಿದ್ದೀಯ ಅಂದರೆ ಇರುವೆ ಕಚ್ಚಿದೆಯೆಂದು ಹೇಳಿದನಂತೆ.

ಕೊನೆಯ ಪ್ರಶ್ನೆ ಇರುವೆ! ನೀನೇಕೆ ಕಚ್ಚಿದ್ದೀಯ? ಎಂದು ಕೇಳೋಣ. ತಲೆಯಲ್ಲಿನ ಗುಣಗಳೆ ಎಲ್ಲ ಕೆಲಸಗಳಿಗೆ ಕಾರಣ. ಗುಣಗಳೊಂದಿಗೆ ಸಂಬಂಧ ಇಲ್ಲದೇ ಹೋದರೆ ಯಾವ ಕಾರ್ಯವೂ ಇಲ್ಲ, ಯಾವ ಕರ್ಮ ಇಲ್ಲ. ಗುಣಗಳಲ್ಲಿ ಜೀವಿಯು ಸೇರಿರುವವರೆಗು ಅವುಗಳ ಬಾಧೆ ಜೀವಿಗೆ ತಪ್ಪುವುದಿಲ್ಲ. ಗುಣಗಳ ಕೆಲಸವೆ ಅದು ಆಗಿರುವುದರಿಂದ ನನ್ನ ಹುತ್ತದಲ್ಲಿ ಬೆರಳಿಟ್ಟರೆ ನಾನು ಕಚ್ಚುವುದಿಲ್ಲವೆ ಎಂದು ಇರುವೆ ಸಮಾಧಾನ ಹೇಳಿದೆಯಂತೆ.

ಹುಲ್ಲಿನಿಂದ ಪ್ರಾರಂಭವಾಗಿ ಕೊನೆಗೆ ಇರುವೆಯೊಂದಿಗೆ ಮುಗಿದಿದೆ. ಅಂದರೆ ಕರ್ಮ ಕೊನೆಗೆ ಗುಣಗಳವರೆಗು ಆಚರಣೆಯಲ್ಲಿದ್ದು ಜೀವಾತ್ಮನನ್ನು ಕಷ್ಟ ಸುಖಗಳಲ್ಲಿ ಮುಳುಗಿಸಿ ಯೋಗದ ಕಡೆಗೆ ಬಾರದಂತೆ ಮಾಡುತ್ತಿದೆ. ಯೋಗವನ್ನಾಚರಿಸಬೇಕೆಂದರೆ ಕರ್ಮ, ಪ್ರಕೃತಿ, ಗುಣಗಳು ಎಲ್ಲ ಅಡಚಣೆಗಳೆ. ಇವು ಸರಪಳಿಯಂತೆ ಒಂದರ ಹಿಂದೆ ಒಂದು ಇದ್ದು ಯಾವ ಕಾರಣಕ್ಕು ಅವಕಾಶಕೊಡುವುದಿಲ್ಲ. ಈ ಸರಪಳಿ ಅಡಚಣೆಗಳು ಕಿತ್ತುಹೋಗಬೇಕೆಂದರೆ ಜ್ಞಾನದ ಮೇಲೆ, ಯೋಗದ ಮೇಲೆ ಶ್ರದ್ಧೆ ಅವಶ್ಯಕ. ಶ್ರದ್ಧೆ ಕರ್ಮವನ್ನು ಕಿತ್ತು ಅವುಗಳಿಂದ ಬರುವ ಗುಣಗಳನ್ನು ಅಡಗಿಸಿ ಯೋಗಮಾರ್ಗದಲ್ಲಿ ನಡೆಸಬಲ್ಲದು. "ಶ್ರದ್ಧಾವಾನ್ ಲಭತೇ ಜ್ಞಾನಂ" ಎಂದು ಗೀತೆಯಲ್ಲಿಯು ಸಹ ಹೇಳಿದ್ದಾರೆ.

ಶ್ರದ್ಧೆ ಎನ್ನುವುದೇ ಕೆಲಸದವನಿಗೆ ಅಮೃತ ಆಹಾರವಾಗಿ, ಸಾಧನೆ ಎನ್ನುವ ಕೆಲಸ ಮಾಡಿಸಿ, ಕರ್ಮ ಎನ್ನುವ ಹುಲ್ಲನ್ನು ಆಕಳು ಎನ್ನುವ ಅಗ್ನಿಗೆ ಆಹುತಿಯಂತೆ ಹಾಕಿಸಬಲ್ಲದು. ಶ್ರದ್ಧೆ ಇಲ್ಲದಿರುವಾಗ ಕರ್ಮಚಕ್ರದಿಂದ ಹೊರಬೀಳಲಾರರು, ಯೋಗವಾಚರಿಸಲಾರರು. ಕರ್ಮ ಎನ್ನುವ ಹುಲ್ಲಿನ ಬಣಿವೆಯನ್ನು ತೊಲಗಿಸಲಾರರು. ನಿತ್ಯವೂ ಯೋಗ ಆಚರಿಸುವವರಿಗಾದರೂ ಕರ್ಮ ನಶಿಸುವುದಕ್ಕೆ ಎಷ್ಟೋ ಕಾಲ ಇಲ್ಲವೆ ಎಷ್ಟೋ ಜನ್ಮಗಳು ಬೇಕಾಗುತ್ತದೆ. ಪೂರ್ವದಲ್ಲಿ ಹಿರಿಯರು ಚಿಕ್ಕ ವಯಸ್ಸಿನಲ್ಲಿಯೇ ಜ್ಞಾನವನ್ನು ಪ್ರಜೆಗಳಿಗೆ ಒದಗಿಸಬೇಕೆಂಬ ಉದ್ದೇಶದಿಂದ ಇಂತಹ ಕಥೆಗಳು ಎಷ್ಟೋ ಹೇಳಿ ಅವುಗಳ ವಿವರ ತಿಳಿಸುತ್ತಿದ್ದರು. ಆ ಕಥೆಗಳೇ ಈಗ ಇಲ್ಲದಂತೇ ಹೋಗಿವೆ. ಗುರುತಿಗೆ ಯಾವುದಾದರೊಂದು ಉಳಿದಿದ್ದರೂ ಅವುಗಳ ವಿವರ ತಿಳಿದಿಲ್ಲ. ಇಂತವುಗಳೆ ಜ್ಞಾನ – ಅಜ್ಞಾನಗಳ ಕುರಿತು ತಿಳಿಸುವ "ಹುಲಿಮೇಕೆ" ಕಥೆಯನ್ನು, ಜನನ ಮರಣಗಳು ತಪ್ಪುವುದಿಲ್ಲವೆಂದು ತಿಳಿಸುವ "ಆಕಳು ಕರು" ಕಥೆಗಳನ್ನು, ಕರ್ಮಭೇದಗಳನ್ನು ತಿಳಿಸುವ "ಕಾಗೆಮ್ಮ ಗುಬ್ಬೆಮ್ಮ" ಕಥೆಗಳನ್ನು ತಿಳಿಸಿದ ಹಿರಿಯರಿಗೆ ನಾವು ಎಷ್ಟೋ ಧನ್ಯವಾದಗಳನ್ನು ತಿಳಿಸಬೇಕಾಗಿದೆ. ಹಿರಿಯರ ಕೃಷಿಗೆ ಸಾನುಕೂಲವಾಗಿ ನಾವು ಜ್ಞಾನಮಾರ್ಗದಲ್ಲಿ ನಡೆಯುವೆವೆಂದು ಆಶಿಸೋಣ.

1. ಒಂದಾನೊಂದು ಕಾಲದಲ್ಲಿ (ಒಬ್ಬ) ರಾಜ = ಪರಮಾತ್ಮ
2. ಆರು ಮೀನುಗಳು, ಏಳನೆ ಮೀನು = ಷಟ್‌ಚಕ್ರಗಳು, ಸಹಸ್ರಾರ
3. ಹುಲ್ಲಿನ ಬಣಿವೆ = ಅನೇಕವಾಗಿ ಚಿಗುರುಗಳಾಗಿ ಬೆಳೆದುಹೋಗಿರುವ ಕರ್ಮ
4. ಆಕಳು = ಜ್ಞಾನಾಗ್ನಿ
5. ಕೆಲಸದವನು = ಯೋಗಸಾಧನೆ
6. ಅಜ್ಜಿ = ಯೋಗಸಾಧನೆಗೆ ಅಡಚಣೆಯಾದ ಮಾಯೆ
7. ಅನ್ನ = ತೃಪ್ತಿ ಮಾಯೆ ತೃಪ್ತಿಯನ್ನು ಕೊಡಲಿಲ್ಲ.

8. ಹುಡುಗ = ಜೀವಾತ್ಮ

9. ಇರುವೆ = ಯೋಚನೆಗಳು

10. ಇರುವೆಯ ಹುತ್ತ = ತಲೆಯಲ್ಲಿನ (ಗುಣಚಕ್ರದಲ್ಲಿನ) ಗುಣಭಾಗ.

# ಮುಟ್ಟಿದರೆ ಮುನಿ – ಲೋಳೆಸರ

ಒಂದಾನೊಂದು ಕಾಲದಲ್ಲಿ ಒಬ್ಬ ರಾಜ. ಆ ರಾಜನಿಗೆ ಏಳು ಜನ ಗಂಡು ಮಕ್ಕಳಿದ್ದ ಹಾಗೆ, ಒಂದಾನೊಂದು ಕಾಲದಲ್ಲಿ ಒಬ್ಬ ಗುರು. ಆ ಗುರುವಿಗೆ ಏಳು ಜನ ಶಿಷ್ಯರಿದ್ದರು ರಾಜನ ಮಕ್ಕಳು ಕಾಡಿಗೆ ಬೇಟೆಯಾಡಲು ಹೋದಂತೆ ಶಿಷ್ಯರೆಲ್ಲಾ ಸೇರಿ ಕಾಡಿಗೆ ಕಟ್ಟಿಗೆ ತರಲು ಹೋದರು. ಕಾಡಿನಲ್ಲಿ ಅವರಿಗೆ ಒಂದು ಮುಟ್ಟಿದರೆ ಮುನಿ ಗಿಡ ಕಾಣಿಸಿತು. ಒಬ್ಬನ ಕೈ ಆಕಸ್ಮಿಕವಾಗಿ ಆ ಗಿಡಕ್ಕೆ ತಾಕಿತು. ತಾಕಿದ ಕೂಡಲೆ ಕೈ ತಾಕಿದ ಎಲೆಗಳೆಲ್ಲ ಮುದುರಿಕೊಳ್ಳಲು ಪ್ರಾರಂಭಿಸುವುದನ್ನು ಕೈ ತಾಕಿಸಿದ ಶಿಷ್ಯನೇ ನೋಡಿದನು. ಕೈ ತಾಕಿದ ತಕ್ಷಣವೇ ಎಲೆಗಳು ಮುದುರಿಕೊಳ್ಳುವುದು ಆ ಶಿಷ್ಯನಿಗೊಂದು ವಿಚಿತ್ರವಾಗಿ ಕಾಣಿಸಿತು. ತಕ್ಷಣವೇ ಉಳಿದ ಆರು ಜನರನ್ನು ಕರೆದು ಆ ಗಿಡವನ್ನು ತೋರಿಸಿ ವಿಷಯವನ್ನು ತಿಳಿಸಿದನು. ಕೇಳಿದ ನಂತರ ಉಳಿದವರು ಸಹ ತಾಕಿ ನೋಡಿದರು. ಮೊದಲನೆಯವನು ಹೇಳಿದಂತೇ ಇದೆ. ಎಲ್ಲರೂ ಮನೆಗೆ ಹೋದಮೇಲೆ ಗುರುಗಳ ಬಳಿ ಸೇರಿ ಕಾಡಿನಲ್ಲಿ ಒಂದು ಗಿಡವನ್ನು ತಾಕಿದ ತಕ್ಷಣವೇ ಮುದುರಿಕೊಂಡಿತೆಂದು ಏಕೆ ಹಾಗೆ ಮುದುರಿಕೊಳ್ಳುತ್ತಿದೆಯೆಂದು ಕೇಳಿದರು. ವಿಷಯ ತಿಳಿದುಕೊಂಡ ಗುರುಗಳು ಅವರನ್ನು ಜ್ಞಾನ ಮಾರ್ಗದಲ್ಲಿ ನಡೆಸ ಬೇಕೆಂದುಕೊಂಡು ಆ ವಿಷಯವನ್ನು ಚಮತ್ಕರಿಸಿ ಹೀಗೆ ಹೇಳಿದನು. “ಎದುರಿಗಿರುವ ಮನುಷ್ಯ ತಾಕಿದರೆ ಆ ಗಿಡ ಮುದುರಿಕೊಳ್ಳುತ್ತ ಇತರರಿಗೆ ಒಂದು ಸಂದೇಶವನ್ನು ಕೊಡುತ್ತಿದೆ. ಗುರು ಜ್ಞಾನವೆಂಬ ಶಬ್ದವನ್ನು ಶಿಷ್ಯನಿಗೆ ತಾಕಿಸಿದ ತಕ್ಷಣವೆ ಶಿಷ್ಯನು ಸಹ ಈ ವಿಧದಲ್ಲಿ ತನ್ನಲ್ಲಿನ ಅಹಂಕಾರವನ್ನು ಮುದುರಿಕೊಳ್ಳಬೇಕೆಂದು ಮುಟ್ಟಿದರೆ ಮುನಿ ಗಿಡ ಮುದುರಿಕೊಳ್ಳುತ್ತದೆಂದರು.

ಮುಟ್ಟಿದರೆ ಮುನಿ ಗಿಡದಂತಹ ಚಿಕ್ಕ ಗಿಡ ಹೀಗೆಂದು ಸೂಚಿಸಿದರೂ ಅರ್ಥ ಮಾಡಿಕೊಳ್ಳದೇ ಅಹಂಕಾರವನ್ನು ಅಡಗಿಸಿಕೊಳ್ಳದ ನಿಮ್ಮಂತಹ ಶಿಷ್ಯರು ಗುರುವಿನ ಬಳಿ ಎಷ್ಟು ವರ್ಷಗಳಿದ್ದರೂ ಏನು ಪ್ರಯೋಜನವಿಲ್ಲವೆಂದು ಗುರುಗಳು ಎಚ್ಚರಿಸಿದರು" ಗುರುಗಳ ಮಾತುಗಳನ್ನು ಕೇಳಿ ಶಿಷ್ಯರೆಲ್ಲರೂ ಬಾಧೆಪಟ್ಟು ಇನ್ನು ಮುಂದೆ ತಮ್ಮಲ್ಲಿ ಅಹಂಕಾರವಿಲ್ಲದಂತೆ ಮಾಡಿಕೊಳ್ಳಬೇಕೆಂದುಕೊಂಡರು. ಇನ್ನು ಮುಂದೆ ತಮ್ಮಲ್ಲಿ ಅಹಂಕಾರ ಇಲ್ಲದಂತೆ ಮಡಿಕೊಳ್ಳುತ್ತೇವೆಂದು ಗುರುಗಳ ಎದುರಿಗೆ ಪ್ರತಿಜ್ಞೆ ಮಾಡಿದರು.

ಗುರುಗಳು ಅವರ ಛಲಕ್ಕೆ ನಕ್ಕು "ನೀವು ಇಂತಹ ಛಲದಿಂದಿದ್ದು ಅಹಂಕಾರವನ್ನು ನಿಮ್ಮಲ್ಲಿ ಇಲ್ಲದಂತೆ ಮಾಡಿಕೊಳ್ಳಬೇಕೆಂದೇ ತಿಳಿಸುತ್ತಿದ್ದೇನೆ. ಒಂದು ದಿನ ಅಹಂಕಾರ ಇಲ್ಲದಂತೆ ಅಡಗಿಸಿಕೊಂಡಷ್ಟು ಮಾತ್ರಕ್ಕೆ ಅದನ್ನು ಪೂರ್ತಿ ಗೆದ್ದಂತೆ ಅಲ್ಲ. ಪ್ರತಿ ಕ್ಷಣವೂ ಅದರ ಮೇಲೆ ಜ್ಞಾಪಕದಿಂದಿರುವಾಗಲೆ ಅಹಂಕಾರವನ್ನು ಪೂರ್ತಿಯಾಗಿ ಜಯಿಸಲು ಸಾಧ್ಯವಾಗುತ್ತದೆ. ಹಾಗಲ್ಲದೇ ಹೋದರೆ ಅದಕ್ಕೆ ವಶವಾಗಿ ಜ್ಞಾನಕ್ಕೆ ದೂರವಾಗಿ ಕರ್ಮಬದ್ಧರಾಗುತ್ತೀರ. ಹಾಗಾಗದಂತೆ ನಿತ್ಯವೂ ಜಾಗ್ರತೆಯಿಂದಿರಿ" ಎಂದನು. ಅಷ್ಟಕ್ಕೇ ಸುಮ್ಮನಾಗದೇ ಈ ದಿನದಿಂದ ನೀವು ನಿಮ್ಮ ಮನೆಗೆ ಹೊರಡಿರಿ ಆಗಾಗ ಬರುತ್ತಾ ಜ್ಞಾನವನ್ನು ತಿಳಿದುಕೊಳ್ಳುತ್ತಾ ಅಹಂಕಾರ ರಹಿತವಾಗಿ ಇರಬೇಕೆಂದು ಹೇಳಿದನು. ಗುರುಗಳು ಹೋಗಲು ಹೇಳಿರುವುದರಿಂದ ಎಲ್ಲರೂ ಅವರವರ ಮನೆಗಳಿಗೆ ಹೊರಟುಹೋಗಿ ಗುರುಗಳು ಹೇಳಿದಂತೆ ಆಗಾಗ ಯಾರ ಅನುಕೂಲದಂತೆ ಅವರು ಬಂದು ಹೋಗುತ್ತಾ ಇರುತ್ತಿದ್ದರು.

ಗುರುವಿನ ಬಳಿ ಇದ್ದಾಗ ನಿತ್ಯವೂ ಗುರುಗಳನ್ನು ದರ್ಶನ ಮಾಡಿ ಕೊಳ್ಳುತ್ತಾ ಗುರುಗಳು ನಿತ್ಯವೂ ಹೇಳುತ್ತಿದ್ದ ಬೋಧನೆಗಳನ್ನು ಕೇಳುತ್ತಿದ್ದರು. ಆಗ ಅದರ ಬೆಲೆ ತಿಳಿಯದಿದ್ದರೂ ಯಾರ ಮನೆಗಳಿಗೆ ಅವರು ಹೋದ ನಂತರ ಆ ಬೆಲೆ ಅವರಿಗೆ ಪೂರ್ತಿಯಾಗಿ ತಿಳಿದು ಬಂದಿತು. ಆಗಾಗ ಗುರುಗಳು ಆಶ್ರಮವನ್ನು ಬಿಟ್ಟು ಹೊರಗಡೆ ಹೋಗುವುದರಿಂದ ಗುರುಗಳ ದರ್ಶನ

ದೊರಕುತ್ತಿರಲಿಲ್ಲ. ಒಂದು ವೇಳೆ ದೊರಕಿದರೂ ಆತನು ಯಾವುದೋ ಕೆಲಸಗಳ ಮೇಲೆ ಮಗ್ನವಾಗಿ ಮಣ್ಣು ಮಸಿ ಊಸಿಕೊಂಡು ಕಾಣಿಸುತ್ತಿದ್ದರು. ಒಳ್ಳೆಯ ಬಟ್ಟೆಗಳನ್ನು ಹಾಕಿಕೊಂಡ ಶಿಷ್ಯರು ಮಸಿ ಊಸಿಕೊಂಡ ಗುರುವನ್ನು ನೋಡಿ ಗುರುವನ್ನು ತಾಕಿದರೆ ತಮಗೂ ಸಹ ಮಸಿ ಆಗುತ್ತದೆಂದು ಅಂದುಕೊಳ್ಳುತ್ತಿದ್ದರು. ಮೊದಲ ಹಾಗೆ ಇಲ್ಲದೆ ಹೆಚ್ಚಿನ ಕೆಲಸಗಳು ಮಾಡುವುದರಲ್ಲಿ ಮಗ್ನರಾಗಿದ್ದಾರೆ, ಗುರುಗಳಿಗೂ ಸಹ ಈ ನಡುವೆ ಆಸೆ ಹೆಚ್ಚಾಗಿದೆ ಎಂದು ಅಂದುಕೊಳ್ಳುತ್ತಿದ್ದರು. ಪಾಪ ಹೀಗೆ ಅವರಿಗೆ ಮೊದಲಿನ ಹಾಗೆ ಜ್ಞಾನ ಬೋಧನೆಗಳು ದೊರಕುತ್ತಿರಲಿಲ್ಲ. ಮೊದಲು ಗುರುಗಳಿಗೆ ಗುರುಪೂಜೆಗಳು ನಿರ್ವಹಿಸುತ್ತಿದ್ದರು ಶಿಷ್ಯರು. ಆದರೆ ಪೂಜೆಯ ದಿನವೂ ಸಹ ಗುರುಗಳು ಬಿಜಿ ಯಾಗಿರುವುದರಿಂದ ಮೊದಲಿನ ಹಾಗೆ ಪೂಜೆಗಳು ಮಾಡಲಾಗದೆ ಹೋದರು. ಗುರುಗಳು ಆಶ್ರಮದಲ್ಲಿ ಇರುವುದಿಲ್ಲ ಎಲ್ಲಿಯೋ ತಿರುಗುತ್ತಿರುತ್ತಾರೆಂದು ಅವರು ಆಶ್ರಮಕ್ಕೆ ಬರುವುದನ್ನೆ ಕಡಿಮೆಮಾಡಿದ್ದಾರೆ.

ಹೀಗೆ ಸ್ವಲ್ಪ ಕಾಲ ಕಳೆದಾಗ ಶಿಷ್ಯರು  ಏಳು ಜನ ಒಂದು ಕಡೆ ಸೇರಿ ನಮ್ಮ ಗುರುಗಳು ಕೆಲಸಗಳ ಮೇಲೆ ಇದ್ದಾನೆಂದು ನಾವು ಜ್ಞಾನದ ಮೇಲೆಯೇ ಶ್ರದ್ಧೆ ಕಡಿಮೆಮಾಡಿಕೊಂಡಿದ್ದೇವೆ. ಗುರುಗಳು ತಿಂಗಳಿಗೆ ಹತ್ತು ದಿನಗಳಾದರೂ ಆಶ್ರಮದಲ್ಲಿ ಇರುತ್ತಾರಲ್ಲ! ಅಂತಹ ಸಮಯದಲ್ಲಿ ತಿಳಿದುಕೊಂಡು ಗುರುಗಳನ್ನು ದರ್ಶನ ಮಾಡಿಕೊಂಡು ಜ್ಞಾನ ತಿಳಿದುಕೊಳ್ಳಬಹುದಲ್ಲವೆ! ಇದರಲ್ಲಿ ನಮ್ಮ ತಪ್ಪೇ ಹೆಚ್ಚಿನದಾಗಿದೆ. ಈಗಿನಿಂದ ಕಡು ಕಟ್ಟೆಚ್ಚರದಿಂದಿದ್ದು ಗುರುಗಳನ್ನು ದರ್ಶನ ಮಾಡಿ ಸೇವಿಸಬೇಕೆಂದುಕೊಂಡರಂತೆ. ಆಗಿನಿಂದ ಯಾವಾಗ ಬಂದರೂ ಎಷ್ಟೋ ಬಾರಿ ಬಂದರು ಗುರುಗಳು ಸಿಗಲಿಲ್ಲ. ಶಿಷ್ಯರಲ್ಲಿ ಮತ್ತೇ ಶ್ರದ್ಧೆ ಹೆಚ್ಚಾಗಿದೆ. ಕೊನೆಗೆ ಗುರುಪೂಜೆ ದಿನವಾದರೂ ಆಶ್ರಮದಲ್ಲಿ ಇರುತ್ತಾರೆಂದು ಏಳು ಜನ ಶಿಷ್ಯರು ಆ ದಿನಕ್ಕಾಗಿ ಕಾದುಕೊಂಡಿದ್ದರಂತೆ. ಆ ದಿನ ಬಂದಿತು. ಈ ದಿನ ಗುರುಗಳ ದರ್ಶನ ತಪ್ಪದೇ ಆಗುತ್ತದೆ. ಈ ದಿನ ಹೇಗೆ ತಪ್ಪಿಸಿಕೊಳ್ಳುತ್ತಾನೋ ನೋಡೋಣವೆಂದು ಶ್ರದ್ಧಾ ಭಕ್ತಿಗಳಿಂದ ಫಲ ಪುಷ್ಪಗಳೊಂದಿಗೆ ಆಶ್ರಮಕ್ಕೆ ಏಳು ಜನ ಬಂದರು. ಆದರೆ ಆ ದಿನವೂ ಸಹ ಗುರುಗಳ ದರ್ಶನ ದೊರಕಲಿಲ್ಲ.

ಕಾರಣ ಹತ್ತು ದಿನಗಳ ಮೊದಲೆ ಗುರುಗಳು ಸತ್ತು ಹೋಗಿದ್ದಾರೆ. ಆ ವಿಷಯವನ್ನು ಸಹ ಹೊರಗಡೆ ಹೋಗಿ ಹೇಳುವ ಗಂಡಸರು ಇಲ್ಲವಾದ್ದರಿಂದ ಯಾರ ಸಹಾಯ ಇಲ್ಲದೇ ಆಶ್ರಮದಲ್ಲಿರುವ ಹೆಂಗಸರೇ ಗುರುಗಳನ್ನು ಸಮಾಧಿ ಮಾಡಿದರು. ಈ ವಿಷಯವನ್ನು ತಿಳಿದುಕೊಂಡ ಏಳು ಜನ ಶಿಷ್ಯರು ಅವರವರ ಭಕ್ತಿಯೆಲ್ಲವನ್ನು ತೋರಿಸಿ ಅಳತೊಡಗಿದರು. ಅಯ್ಯೋ ನಾವಿದ್ದು ನಿನಗೆ ಏನೂ ಪ್ರಯೋಜನೆ ಇಲ್ಲದಂತಾಯಿತೆ ಎಂದು ಒಬ್ಬನಂದರೆ, ಇಷ್ಟು ಬೇಗ ಸತ್ತುಹೋದೆಯ ಇದು ನಿನಗೆ ಸರಿಯೇನಾ ಎಂದು ಮತ್ತೊಬ್ಬನು, ಹೋಗುವವನು ಇಂತಹ ಸಮಯಕ್ಕೆ ಹೋಗುತ್ತೇನೆಂದು ಮೊದಲಿಗಾದರೂ ಹೇಳಿದ್ದರೆ ತಪ್ಪದೇ ಬರುತ್ತಿದ್ದೆವಲ್ಲ ಎಂದು ಮತ್ತೊಬ್ಬನು, ನನ್ನ ಶಿಷ್ಯರಿದ್ದಾರೆಂದು ನಮ್ಮ ಮೇಲೆ ದಯೆಯಿಲ್ಲದೆ ಹೋಗಿದ್ದೀಯ ಎಂದು ಒಬ್ಬನು, ನಮ್ಮನ್ನು ಆಕಡೆ ಈ ಕಡೆ ಇಲ್ಲದಂತೆ ಮಾಡಿ ಹೋದೆಯ ಎಂದು ಇನ್ನೊಬ್ಬನು, ಹೋದ ಗುರುಪೌರ್ಣಮಿ ದಿನ ಗುರುಪೂಜೆ ಮಾಡಲಿಲ್ಲವೆಂದು ನಾವು ಬರಲಿಲ್ಲ. ಈ ದಿನ ಸಿಗುತ್ತೀರೆಂದು ಬಂದರೆ ನಮ್ಮನ್ನು ಅನ್ಯಾಯ ಮಾಡಿ ಹೋದೆಯಾ ಎಂದನೊಬ್ಬನು. ಇನ್ನೂ ಏಳನೆಯವನು ನೀನು ಸಾಯುವುದು ತಿಳಿದಿದ್ದರೇ ಹೇಗಾದರೂ ನಿನ್ನನ್ನು ಸಾಯದಂತೆ ಕಾಪಾಡಿಕೊಳ್ಳುತ್ತಿದ್ದೇನೆಂದು ಏಳು ಜನ ಅತ್ತರು.

ನಾಲ್ಕು ದಿನಗಳ ನಂತರ ಗುರುಗಳು ಎಲ್ಲರಿಗು ಸ್ವಪ್ನದೊಳಗೆ ಬಂದು ಒಬ್ಬೊಬ್ಬರನ್ನು ಒಂದೊಂದು ವಿಧದಲ್ಲಿ ಮಾತನಾಡಿಸಿದನು. "ಏನಯ್ಯಾ ನಾವಿದ್ದು ನಿನಗೆ ಏನು ಪ್ರಯೋಜನ ಇಲ್ಲವೆಂದು ಅಳುತ್ತೀಯಾ? ನಿನಗೆ ಬುದ್ಧಿ ಇದೆಯೇನಯ್ಯಾ ನಾನು ನಿಮಗೆ ಪ್ರಯೋಜನವಾ? ಇಲ್ಲವೆ ನೀವು ನನಗೆ ಪ್ರಯೋಜನವಾ? ನಾನಿದ್ದರೇನೇ ನನ್ನಿಂದ ನಿಮಗೆ ಜ್ಞಾನ ಪ್ರಯೋಜನವಿರುತ್ತದೆ. ನೀವಿದ್ದರೆ ನನಗೆ ಯಾವ ಪ್ರಯೋಜನವಿಲ್ಲವೆಂದು ತಿಳಿದುಕೋ" ಎಂದನು.

ಮತ್ತೊಬ್ಬನಿಗೆ ಕಾಣಿಸಿ "ಇಷ್ಟು ಬೇಗ ಸತ್ತುಹೋದೆಯಾ ಯೆಂದು, ಇದು ನಿನಗೆ ಸರಿಯೇನಾ? ಅನ್ನುತ್ತೀಯಾ! ಸಾವೆನ್ನುವುದು ನಮ್ಮ ಕೈಯಲ್ಲಿದೆಯೇನಯ್ಯಾ ನನ್ನ ಇಷ್ಟ ಪ್ರಕಾರ ನಿನ್ನ ಇಷ್ಟ ಪ್ರಕಾರ ಸಾಯುವುದಕ್ಕೆ.

ಕಾಲ ತೀರಿ ನನಗೆ ಸಾವು ಬಂದರೆ ನಾನೇನೋ ತಪ್ಪು ಮಾಡಿದಂತೆ ಇದು ನಿನಗೆ ಸರಿಯಾ ಅನ್ನುತ್ತೀಯಾ! ಸಾವು ಹುಟ್ಟುಗಳ ಸಮಯ ಯಾರ ಕೈಯಲ್ಲಿಲ್ಲವೆಂದು ತಿಳಿದುಕೋ. ಸಾವಾಗಲಿ ಹುಟ್ಟುವಿಕೆಯಾಗಲಿ ಹೇಳಿ ಬರುವುದಿಲ್ಲ. ವಿಧಿ ಪ್ರಕಾರ ನಡೆಯುವವೆ ಆಗಲಿ ಯಾರ ಇಷ್ಟ ಪ್ರಕಾರ ನಡೆಯುವುದಿಲ್ಲವೆಂದು ತಿಳಿದುಕೊ" ಎಂದನು.

ಮೂರನೆಯವನಿಗು ಸಹ ಸ್ವಪ್ನದಲ್ಲಿ ಕಾಣಿಸಿದನು. ಆತನೊಂದಿಗು ಸಹ "ಏನಯ್ಯಾ ನಾನು ಹೋಗುವಾಗ ನಿನಗೆ ಮೊದಲೆ ಹೇಳಬೇಕಾ? ಹೇಳಿದರೆ ನೀನು ನನ್ನನ್ನು ಕಳುಹಿಸುವುದಕ್ಕೆ ಬರುತ್ತಿದ್ದೆಯಾ! ನೀನು ಬರುವುದರಿಂದ ನನಗೆ ಏನೊ ಒಳ್ಳೆಯದು ಆಗುತ್ತದೆನ್ನುವಂತೆ ಹೇಳಿದ್ದರೆ ಬರುತ್ತಿದ್ದೆನು ಅನ್ನುತ್ತಿದ್ದೀಯ ನೀನು ಬರುವುದರಿಂದ ಲಾಭವಾಗಲಿ, ಬಾರದಿರುವುದರಿಂದ ನಷ್ಟವಾಗಲಿ ನನಗೆ ಯಾವುದೂ ಇಲ್ಲವೆಂದು ತಿಳಿದುಕೋ ಎಂದನು.

ಹಾಗೇ ನಾಲ್ಕನೆಯವನಿಗೂ ಸಹ ಕಾಣಿಸಿದನು. "ನೀನು ಏನಯ್ಯಾ! ನನ್ನ ಶಿಷ್ಯರಿದ್ದಾರಲ್ಲವೇಯೆಂದು ಸ್ವಲ್ಪವಾದರೂ ದಯೆ ಇಲ್ಲದಂತೆ ಹೋದೆಯಾ ಅನ್ನುತ್ತೀಯ. ನನಗೆ ನಿಮ್ಮ ಮೇಲೆ ದಯೆ ಇಲ್ಲಯ್ಯಾ, ನೀವು ಜ್ಞಾನ ತಿಳಿದುಕೊಳ್ಳಬೇಕೆಂಬ ಆಕಾಂಕ್ಷೆ ಹೊರತು ಮತ್ತೇನು ಇಲ್ಲ. ನೀವೇನೊ ನನಗೂ ಸಹ ಆಸೆ ಹೆಚ್ಚಾಗಿದೆಯೆಂದು ಕೆಲಸಗಳು ಹೆಚ್ಚಾಗಿ ಮಾಡುತ್ತಿದ್ದಾನೆಂದು ಅಂದುಕೊಂಡಿದ್ದೀರಿ. ಇನ್ನು ಸ್ವಲ್ಪ ಕಾಲವಿದ್ದರೆ ಆಸೆಯನ್ನು ಕಡಿಮೆ ಮಾಡಿ ಕೊಂಡು ಕೆಲಸಗಳನ್ನು ಬಿಟ್ಟು ಸುಖವಾಗಿರಿ ಏಕಿಷ್ಟು ಕಷ್ಟಪಡುತ್ತಿದ್ದೀರೆಂದು ನನಗೇ ಜ್ಞಾನ ಹೇಳುವ ಹಾಗೆ ಇದ್ದೀರೆಂದು, ಅಲ್ಲಿಯವರೆಗು ಬಾರದ ಮೊದಲೆ ಸಾಯುವುದು ಒಳ್ಳೆಯದಲ್ಲವೆ! ಶಿಷ್ಯರು ಜ್ಞಾನ ತಿಳಿದುಕೊಳ್ಳುತ್ತಾ ಇದ್ದರೆ ಗುರುವು ಇನ್ನೂ ಸ್ವಲ್ಪ ಕಾಲ ಬದುಕಬೇಕೆಂದುಕೊಳ್ಳುತ್ತಾನೆ. ಆದರೆ ಜ್ಞಾನದ ಮೇಲೆ ಆಸಕ್ತಿ ಮಾತ್ರ ತೋರಿಸುತ್ತ ಅಜ್ಞಾನದಲ್ಲಿಯೇ ಹೆಚ್ಚಿನ ಕಾಲ ಇರುವವರೊಂದಿಗೆ ಇನ್ನು ಕೆಲಸವಿಲ್ಲವೆಂದು ಜಾರಿಕೊಳ್ಳುವುದು ಒಳ್ಳೆಯದಲ್ಲವೆ! ಕರ್ಮ ಯೋಗವನ್ನಾಚರಿಸಿ ಕೆಲಸಗಳು ಮಾಡಿ ನಿಮಗೆ ಮಾರ್ಗದರ್ಶಕನಾಗಿದ್ದರೆ

ಮಸಿ ಬಳಿದುಕೊಂಡಿದ್ದಾನೆಂದುಕೊಳ್ಳುತ್ತೀರಾ? ಕರ್ಮಾನುಸಾರ ಯಾವ ಕೆಲಸ ತಟಸ್ಥವಾದರೂ ಆಚರಿಸಬೇಕಾಗಿ ಬಂದರೂ ಕೆಟ್ಟದಾದರೂ ಒಳ್ಳೆಯದಾದರೂ ಅಹಂಕಾರರಹಿತನಾಗಿ ಕೆಲಸ ಮಾಡಬೇಕೆಂದು ನಿಮಗೆ ನಾನು ಹೇಳಲಿಲ್ಲವೆ! ಆ ಮಾತು ಮರೆತು ಅಹಂಕಾರಯುತರಾಗಿ ನಮಗಿಂತ ಗುರುಗಳಿಗೆ ಕೆಲಸಗಳ ಮೇಲೆ ಹೆಚ್ಚಿನ ತಾಪತ್ರಯ ಇದೆಯೆಂದುಕೊಳ್ಳುತ್ತೀರಾ? "ನನಗೆ ಕೆಲಸಗಳಿಂದ ಲಾಭವಿಲ್ಲ. ಮಾಡದೆ ಹೋದರೆ ನಷ್ಟವೂ ಇಲ್ಲ. ಆದರೂ ನಿಮಗಾಗಿ ಕೆಲಸಗಳನ್ನಾಚರಿಸುತ್ತಿದ್ದೇನೆ" ಎನ್ನುವ ಭಗವದ್ಗೀತೆ ಮಾತನ್ನು ಮರೆತಿದ್ದೀರಾ? ಈಗಲಾದರೂ ಕಣ್ತೆರೆದು ಬದುಕಿರಿ" ಎಂದು ಹೇಳಿದನು.

ಇನ್ನೊಬ್ಬನಿಗೂ ಸಹ ಸ್ವಪ್ನದಲ್ಲಿಯೇ ಕಾಣಿಸಿ "ಏನಯ್ಯಾ ನನ್ನನ್ನು ಆಕಡೆ ಈಕಡೆ ಇಲ್ಲದಂತೆ ಮಾಡಿ ಹೋದೆಯಾ ಅನ್ನುತ್ತೀಯಾ! ಆ ಕಡೆ ಅಜ್ಞಾನದಲ್ಲಿ ಇರುವವನನ್ನು ಈ ಕಡೆ ಜ್ಞಾನವಿದೆಯೆಂದು ಹೇಳಿ, ಈಕಡೆ ಬರಲು ಎಷ್ಟು ಹೇಳಿದರೂ ಕೇಳದೆ ಆ ಕಡೆಯೇ ಇದ್ದು, ಆ ಕಡೆ ಈ ಕಡೆ ಇಲ್ಲದಂತೆ ಮಾಡಿದ್ದೀಯೆಂದು ಅನ್ನುತ್ತೀಯ! ಈ ಕಡೆ ಅಂದರೆ ಬರಲಿಲ್ಲ ಆದರೆ ಆಕಡೆಯೇ ಇದ್ದೀಯಲ್ಲವೆ! ಒಂದು ವೇಳೆ ಸ್ವಲ್ಪ ಈಕಡೆ ಬಂದಿದ್ದೇನೆಂದು ಕೊಂಡರೆ ಅದು ನಿನಗೆ ಒಳ್ಳಯದೆಯಾಗಲಿ ಕೆಟ್ಟದಲ್ಲವಲ್ಲ! ಆ ಕಡೆ ಸ್ವಲ್ಪ ಇಲ್ಲದಂತೆ ಹೋಗಿದ್ದೇನೆಂದುಕೊ ಆ ಕಡೆ ಪೂರ್ತಿ ಇಲ್ಲದಂತೆ ಮಾಡಿದ್ದೀಯ ಎನ್ನುವ ಬಾಧೆ ಇದ್ದಂತಿದೆಯಲ್ಲಯ್ಯಾ ನಿನಗೆ. ಆಕಡೆ ಸ್ವಲ್ಪ ಕೆಟ್ಟು, ಈ ಕಡೆ ಸ್ವಲ್ಪ ಬಂದರೂ ಪರವಾಗಿಲ್ಲವೆಂದುಕೊ ಪೂರ್ತಿ ಆಕಡೆ ಇಲ್ಲದೇ ಹೋದೆನೆಂದು ಬಾಧೆ ಪಡಬೇಡ. ಆಕಡೆ ಈ ಕಡೆ ಎಂದು ಅಜ್ಞಾನ ಜ್ಞಾನಗಳನ್ನು ತಿಳಿಸಿದ್ದೇನಲ್ಲ ಪೂರ್ತಿ ಈ ಕಡೆ ನೀನು ಬಾರದೆ ಹೋಗಿದ್ದೀಯ. ಅದಕ್ಕೆ ನಿನ್ನ ಶ್ರದ್ಧೆ ಕಡಿಮೆಯಾಗಿದೆಯಾಗಲಿ ನನ್ನ ತಪ್ಪಿಲ್ಲ. ಈಗಲಾದರೂ ಆಕಡೆ ಬಿಟ್ಟು ಈ ಕಡೆ ಬರಲು ತಿಳಿಸುತ್ತಿದ್ದೇನೆ ಎಚ್ಚರದಿಂದ ಬದುಕು" ಎಂದನು.

ಇನ್ನು ಆರನೆಯವನ ಸ್ವಪ್ನದಲ್ಲಿಯೂ ಸಹ ಬಂದನು. ಆತನೊಂದಿಗೆ "ಗುರುಪೂಜೆ ಮಾಡುತ್ತೀರಾ ಗುರುಪೂಜೆ ಇದೆಯಾ ಎಂದರೆ ಇಲ್ಲಯ್ಯಾ

ನನಗೆ ವ್ಯವಧಿ ಇಲ್ಲ. ಗುರುಪೂಜೆ ಮಾಡುವಸಮಯವಿಲ್ಲ ಪೂಜೆಗೆ ಕೆಲವು ದಿನಗಳು ಹಿಂದೆ ಮುಂದೆ ಬಿಡಬೇಕಾಗಿ ಬರುತ್ತದೆ. ಆದ್ದರಿಂದ ಮಾಡುವು ದಿಲ್ಲವೆಂದು ಹೇಳಿದೆವು. ಆದರೂ ಗುರುಪೂಜೆಯನ್ನು ಶಿಷ್ಯರು ನೀವು ನನಗೆ ಮಾಡಬೇಕಾಗಲಿ ನಾನು ಗುರುಪೂಜೆ ಮಾಡುವುದೇನು. ನನಗೆ ಕೆಲಸಗಳಿವೆ ಯೆಂದರೆ ನಿನ್ನ ಕೆಲಸಗಳು ನೀನು ಮಾಡಿಕೊ ಪೂಜೆ ದಿನ ಮಾತ್ರ ಸ್ವಲ್ಪ ಹೊತ್ತು ನೀನು ಕುಳಿತುಕೊಂಡರೆ ನಾವೇ ಪೂಜೆ ಮಾಡುತ್ತೇವೆಂದು ಏಕೆ ಹೇಳಲಿಲ್ಲ. ನೀವು ಮಾಡುವ ಪೂಜೆಗಾದರೂ ಎಷ್ಟೋ ಬಾರಿ ಮೊದಲು ಕೆಲಸಗಳನ್ನು ನಾನೇ ಮಾಡಬೇಕಾಗಿ ಬಂದಿದೆಯಲ್ಲಯ್ಯಾ! ಹತ್ತು ದಿನಗಳ ಮೊದಲಿನಿಂದಲೂ ಎಲ್ಲ ಕೆಲಸಗಳು ಮಾಡಿ ರೆಡಿಯಾಗಿ ಇಟ್ಟುಕೊಂಡರೆ ಪೂಜೆದಿನ ಮಾತ್ರ ಕೆಲವರು ಬಂದು ಶ್ಲೋಕಗಳನ್ನು ಓದಿ ಪೂಜೆ ಮಾಡಿ ಮರುದಿನ ಹೋದ ದಿನಗಳು ಇದಕ್ಕೂ ಮೊದಲು ಇಲ್ಲವೇನಯ್ಯಾ. ಹಾಗಾದರೂ ಕಳೆದ ವರ್ಷ ಪೂಜೆಗೆ ನೀನು ಬಾರದೆ ತಪ್ಪಿಸಿಕೊಂಡಿದ್ದೀಯಲ್ಲಯ್ಯಾ! ನನಗೆ ನಿಂತುಹೋದಂತೆ ಏಕೆ ಬರಲಿಲ್ಲವೆಂದು ನಾನು ಕೇಳಿದರೆ ಯಾವುದೊ ನೆಪ ಹೇಳಲಿಲ್ಲವೆ! ಆಗ ನೀನು ತಪ್ಪಿಸಿಕೊಂಡಿದ್ದೀಯ ಈಗ ನಿನಗೆ ನಾನು ಪೂರ್ತಿಯಾಗಿ ತಪ್ಪಿಸಿಕೊಂಡಿದ್ದೇನೆ ಸರಿಹೋಯಿತಲ್ಲ! ಏನಾದರೂ ಇರುವಾಗ ಅದರ ಬೆಲೆ ತಿಳಿಯುವುದಿಲ್ಲ. ಇಲ್ಲದಾಗ ತಿಳಿಯುತ್ತದೆ ಆದರೂ ಇಲ್ಲದಾಗ ತಿಳಿದರೂ ಏನು ಪ್ರಯೋಜನವಿಲ್ಲ. ಇರುವಾಗಲೆ ಬೆಲೆ ಗ್ರಹಿಸುವುದು ಸರಿಯಾದದ್ದು. ಬೋಧನೆ ಹೇಳುವಾಗ ಅದರ ಮೇಲೆ ಶ್ರದ್ಧೆ ತೋರಿಸದೆ ಮನೆಹತ್ತಿರ ಚಿಂತೆಗಳು ಮಾಡುತ್ತಿದ್ದೀರಿರ, ಸ್ವಲ್ಪಕಾಲಕ್ಕೆ ಬೋಧನೆ ಮರೆಯಾಗಿ ಹೋಯಿತು. ಪಾದಪೂಜೆ ನಡೆಯುವಾಗಲು ಸಹ ಹಾಗೇ ಮಾಡಿಕೊಂಡಿದ್ದೀರಿ. ಅದೂ ಇಲ್ಲದೆ ಹೋಯಿತು. ಗುರುದರ್ಶನ ಯಾವಾಗಾದರೂ ಸುಲಭವಾಗಿ ದೊರಕುವ ಕಾಲದಲ್ಲಿ ಈ ಊರಿಗೆ ಬಂದು ಸಹ ಪ್ರಪಂಚ ಕೆಲಸಗಳಿಗೆ ಕಾಲ ವಿನಿಯೋಗಿಸಿ ಗುರುದರ್ಶನಕ್ಕಾಗಿ ಸಹ ಬಾರದೆಹೋದ ದಿನಗಳಿವೆ. ಸ್ವಲ್ಪ ಕಾಲಕ್ಕೆ ಗುರುದರ್ಶನವೆಂದು ಬಂದರೆ ಗುರುವೆ ದೊರಕದಂತಾದನು. ಕಾವಲು ಕಾದು ಈ ದಿನವಾದರು ಸಿಗಬಹುದೆಂದು ಬಂದರೆ ಗುರುವೇ ಪ್ರಪಂಚದಲ್ಲಿ

ಇಲ್ಲದೇ ಹೋದ. ಗುರುವು ಇದ್ದಾನಾ ಇಲ್ಲವೋ ಎಂದು ಸಹ ಅಂದುಕೊಳ್ಳಲಿಲ್ಲವೆಂದು ನಿಮಗೆ ತಿಳಿಯದೇ ಗುರು ಮರಣ ಕಾರ್ಯಗಳು ನಡೆದು ಹೋಗಿವೆ ಈಗಲಾದರೂ ಗುರವಿನ ಮೇಲೆ ಹಗಲಿರುಳು ಭಕ್ತಿ ಮತ್ತು ಶ್ರದ್ಧೆಯಿಂದ ಬದುಕಿರಿ" ಎಂದು ಹೇಳಿದನು.

ಇನ್ನು ಏಳನೆಯವನ ಹತ್ತಿರಕ್ಕೂ ಸಹ ಗುರುವು ಸ್ವಪ್ನದಲ್ಲಿಯೆ ಹೋಗಿ ಅಲ್ಲಿಯು ಸಹ ಹೀಗೆ ಹೇಳಿದರು. "ಏನಯ್ಯಾ ಕೊನೆಯ ಶಿಷ್ಯಾ ನಾನು ಸಾಯುವುದು ತಿಳಿದಿದ್ದರೆ ನನ್ನನ್ನು ನೀನು ಕಾಪಾಡುತ್ತಿದ್ದೆಯಾ? ನಾನು ಬದುಕಿರುವಾಗಲೆಲ್ಲ ನಿನ್ನನ್ನು ಕಾಪಾಡು ಎಂದು ನನಗೆ ಮುಗಿಯುತ್ತಿದ್ದೆ. ನಾನು ಸತ್ತ ನಂತರ ನನ್ನನ್ನು ಕಾಪಾಡುವೆನೆಂದು ಅನ್ನುತ್ತೀಯ! ನಾನು ಕಾಪಾಡುವೆನು ಅನ್ನುವುದರಲ್ಲಿ ಅಹಂಕಾರ ಪೂರ್ತಿ ಆವರಿಸಿಕೊಂಡಿದೆ, ಹಿಂದಿನ ಕರ್ಮ ಇದೆಯೆಂದು ಅದರ ಪ್ರಕಾರ ನಡೆಯುವುದೆಂದು ತಿಳಿಯುವುದು ಮರೆತು ಮಾತನಾಡಿದ್ದೀಯ. ಒಂದು ದಿನ ಕಾಡಿಗೆ ಹೋದಾಗ ಮುಟ್ಟಿದರೆ ಮುನಿ (ಮುಡುಗು ತಾವರೆ) ಗಿಡ ಒಂದೇ ಸ್ಪರ್ಶಕ್ಕೆ ಮುದುಡಿಕೊಂಡಂತೆ ಗುರುವಿನ ಜ್ಞಾನ ಸ್ಪರ್ಶಕ್ಕೆ ಅಹಂಕಾರವೆನ್ನುವ ಎಲೆಗಳು ಮುದುಡಿಕೊಳ್ಳಬೇಕೆಂದು ಹೇಳಿದ ಮಾತನ್ನು ಮರೆತು, ಕಿತ್ತು ಬಿಸಾಡಿದರು ಮತ್ತೆ ಭೂಮಿಯಲ್ಲಿ ಊತುಕೊಂಡು ಬದುಕುವ ಲೋಳೆ ಗಿಡದಂತೆ ಅಹಂಕಾರವನ್ನು ಹೊಂದುತ್ತಿದ್ದಾರೆ. ನಾನು ಎಷ್ಟೋ ಬಾರಿ ನಿಮ್ಮ ಅಹಂಕಾರ ಅಡಗಿ ಹೋಗುವಂತೆ ಏನು ಮಾಡಿದರು ಮಾಡಿಸಿದರೂ ಮುಟ್ಟಿದರೆ ಮುನಿ (ಮುಡುಗು ತಾವರೆ) ಗಿಡದಂತೆ ಅಲ್ಲದೆ, ಲೋಳೆ ಗಿಡದಂತೆ ಅಜ್ಞಾನದಲ್ಲಿ ಮತ್ತೆ ಅಹಂಕಾರ ಕೊಂಬೆಯನ್ನು ಅಭಿವೃದ್ಧಿ ಮಾಡಿಕೊಳ್ಳುತ್ತೀರ. ಅದಕ್ಕೆ ನಿಮಗೆ ಸಿಗದಂತೆ ಹೋಗಿದ್ದೇನೆ. ನೀವು ಎಷ್ಟು ಅತ್ತರೂ ನಿಮ್ಮ ಗುರು ಬರುವುದಿಲ್ಲ. ಲೋಳೆ ಗಿಡದಂತೆ ಅಲ್ಲದೆ ಮುಟ್ಟಿದರೆ ಮುನಿ (ಮುಡುಗು ತಾವರೆ) ಗಿಡದಂತೆ ಬದುಕಿರಿ ಹಾಗಾದರೆ ನನ್ನ ಸಮಾಧಿಯಾದರೂ ನಿಮಗೆ ಸಿಗುತ್ತದೆ ಇಲ್ಲವಾದರೆ ನೀವು ನಮಸ್ಕರಿಸುವುದಕ್ಕೆ ನನ್ನ ಗುರುತಾಗಿ ಸಮಾಧಿ ಸಹ ದೊರಕುವುದಿಲ್ಲ ಎಚ್ಚರ" ಎಂದು ಹೇಳಿದನು.

ಬೆಳಗಾಗುತ್ತಲೆ ಶಿಷ್ಯರೆಲ್ಲರೂ ಒಂದು ಕಡೆ ಸೇರಿ ನನಗೆ ಗುರುವು ಕಾಣಿಸಿದ್ದಾನೆಂದರೆ ನನಗೂ ಗುರುವು ಕಾಣಿಸಿದ್ದಾನೆಂದು ಒಬ್ಬರಿಗೊಬ್ಬರು ಹೇಳಿಕೊಂಡರು. ಸತ್ತುಹೋದರೂ ಗುರುಗಳಿಗೆ ನಮ್ಮ ಮೇಲೆ ಎಷ್ಟೋ ಪ್ರೇಮ ಇರುವುದರಿಂದಲೆ ಸ್ವಪ್ನದಲ್ಲಿ ಬಂದು ಎಷ್ಟೋ ಹಿತವನ್ನು ಹೇಳಿದ್ದಾನೆ. ಈ ದಿನದಿಂದ ಲೋಳೆಯಹಾಗೆ ಅಲ್ಲದೆ ಮುಟ್ಟಿದರೆ ಮುನಿ (ಮುಡುಗು ತಾವರೆ) ಹಾಗೆ ಬದುಕಬೇಕೆಂದು ನಿರ್ಣಯಿಸಿಕೊಂಡು ಪ್ರತಿನಿತ್ಯವೂ ಗುರುಗಳ ಸಮಾಧಿಯನ್ನು ಶ್ರದ್ಧೆಯಿಂದ ಪೂಜಿಸುತ್ತ ಜ್ಞಾನವನ್ನು ಮೆಲುಕು ಹಾಕುತ್ತಾ ಕಾಲ ಕಳೆಯುತ್ತಿದ್ದರು. ಒಂದು ದಿನ ಏಳು ಜನ ಶಿಷ್ಯರು ಒಬ್ಬ ಶಿಷ್ಯನ ಮನೆಯಲ್ಲಿ ಸೇರಿ ನಮ್ಮ ಗುರುಗಳು ಇದ್ದಿದ್ದರೆ ಇದು ಒಳ್ಳೆಯದು ಇದು ಕೆಟ್ಟದೆಂದು ಹೇಳುತ್ತಿದ್ದರು. ನಮ್ಮ ಗುರುವೆ ಇದ್ದಿದ್ದರೆ ಎಷ್ಟರ ಮಟ್ಟಿಗೆ ಜ್ಞಾನಿಗಳಾಗುತ್ತಿದೆವೋ ಗುರುಗಳು ಇದ್ದಾಗ ಬೆಲೆ ತಿಳಿಯದೆ ಕಾಲವನ್ನು ವ್ಯರ್ಥಮಾಡಿಕೊಂಡಿದ್ದೇವೆಂದು ಅಂದುಕೊಳ್ಳುತ್ತಿದ್ದರು. ಅಷ್ಟರಲ್ಲಿ ಆ ಶಿಷ್ಯನ ಮನೆಯಲ್ಲಿ ಒಬ್ಬ ಮನುಷ್ಯನಿಗೆ ಒಂದು ದೆವ್ವ ಆವರಿಸಿಕೊಂಡಿತು. ಅದನ್ನು ತಿಳಿದ ಏಳು ಜನ ಶಿಷ್ಯರು ಆ ಮನುಷ್ಯನ ಸುತ್ತಾ ಸೇರಿ "ಏಯ್ ಯಾರು ನೀನು. ಏಕೆ ಬಂದಿದ್ದೀಯ ಹೇಳು" ಎಂದು ಗದರಿಸಿದರು. ಆ ಮಾತು ಕೇಳಿದ ದೆವ್ವ "ಏನೋ ನಾನು ನಿಮ್ಮ ಗುರುವು ನಿಮ್ಮೊಂದಿಗೆ ಮಾತನಾಡುವುದಕ್ಕೆ ಬಂದಿದ್ದೇನೆ" ಎಂದಿತು. ಆ ಮಾತು ಕೇಳಿದ ಶಿಷ್ಯರೆಲ್ಲರೂ ನಕ್ಕರು. ನೀನು ಗುರುವೆಂದು ಹೇಳಿದರೆ ನಂಬುವುದಕ್ಕೆ ನಾವೇನು ಹುಚ್ಚರಾ! ನಮ್ಮ ಗುರುಗಳ ಮಾತೆತ್ತಿದರೆ ಒಡೆಯುತ್ತೇವೆಂದರು. ಪಾಪ ಗುರುಗಳು ಶಿಷ್ಯರ ಕೈಯಲ್ಲಿ ಒದೆಗಳು ತಿನ್ನಬೇಕಾಗುತ್ತದೇನೋ ಎಂದು ಆ ಶರೀರದಲ್ಲಿ ಅಡಗಿಕೊಂಡನು.

ಸಾಯುವಾಗ ಶಿಷ್ಯರು ಹತ್ತಿರ ಇಲ್ಲವಲ್ಲ ಆದ್ದರಿಂದ ಅವರಿಗೆ ಯಾವುದೋ ಈ ವಿಧದಲ್ಲಾದರೂ ಹೇಳಬೇಕೆಂದು ಶಿಷ್ಯರನ್ನು ಹುಡುಕಿಕೊಂಡು ಗುರು ಬಂದರೆ ಶಿಷ್ಯರು ಹೊಡೆಯಲು ಪ್ರಾರಂಭಿಸಿದ್ದಾರೆ, ಯಾವ ವಿಧದಲ್ಲಿ ಇವರೊಂದಿಗೆ ಮಾತನಾಡುವುದೆಂದು ಗುರು ಸೂಕ್ಷ್ಮ ಶರೀರದಿಂದ ಯೋಚಿಸುತ್ತಿದ್ದನು. ಬಹಳ ಜನ ಶಿಷ್ಯರು ಇರುವಾಗ ಒದ್ದರೂ ಒದೆಯುತ್ತಾರೆಂದು

ಒಬ್ಬರಿಬ್ಬರಿರುವಾಗ ನೋಡೋಣವೆಂದುಕೊಂಡನು ಗುರು. ಒಂದು ದಿನ ಮೂವರು ಶಿಷ್ಯರಿರುವಾಗ ಒಬ್ಬನಲ್ಲಿ ಸೇರಿಕೊಂಡು ಮಾತನಾಡತೊಡಗಿದನು. "ಏನಯ್ಯಾ ಶಿಷ್ಯರೆ ಗುರುವೆ ಶಿಷ್ಯರನ್ನು ಹುಡುಕಿಕೊಂಡು ಬಂದರೂ ಶಿಷ್ಯರು ಮಾತನಾಡುವುದೆ ಅಪರೂಪವಾಗಿದೆಯೆ ಇದೇನೇನಯ್ಯಾ ನಾನು ಹೇಳಿದ ಜ್ಞಾನ" ಎಂದು ಬರುತ್ತಲೆ ಜ್ಞಾನದ ಕಥೆ ಎತ್ತಿಕೊಂಡನು. ಇಲ್ಲದೆ ಹೋದರೆ ಹೊಡೆಯುತ್ತಾರೇನೋ ಎನ್ನುವ ಭಯದಿಂದ, ಜ್ಞಾನವೆಂದು ಮಾತನಾಡಿರುವು ದರಿಂದ ಉಳಿದ ಇಬ್ಬರು ಸ್ವಲ್ಪ ನಂಬಿದರು. ಆದರೂ ಸ್ವಲ್ಪ ಅನುಮಾನ ಇದ್ದೆ ಇದೆ. ನೀನು ನಮ್ಮ ಗುರುವಾದರೆ ಮುಟ್ಟಿದರೆ ಮುನಿ (ಮುಡುಗು ತಾವರೆ) ಗಿಡದ ಜ್ಞಾನ ನಿನಗೆ ತಿಳಿದಿದೆಯಾ ಹೇಳು ಎಂದರು. ಗುರುಗಳಿಗೆ ಸಣ್ಣತನವಾ ಯಿತು. ಎಲ್ಲಿಯಾದರೂ ಗುರುಗಳು ಪ್ರಶ್ನೆ ಕೇಳಿದರೆ ಶಿಷ್ಯರು ಹೇಳಬೇಕು. ಇಲ್ಲಿ ಶಿಷ್ಯರು ಗುರುಗಳಿಗೆ ಜ್ಞಾನ ತಿಳಿದಿದೆಯಾ ಎಂದು ಕೇಳುತ್ತಿದ್ದರೆ ಪಾಪ ಆ ಗುರುವಿಗೆ ಸಣ್ಣತನವಲ್ಲದೆ ಮತ್ತೇನಾಗುತ್ತದೆ. ಆಗ ಗುರು ಹೀಗೆ ಅಂದನು. "ಏಯ್ ಇದು ಬಹಳ ಅನ್ಯಾಯಕಣೋ! ಆ ಜ್ಞಾನ ಹೇಳಿದ್ದು ನಾನೇ ಕಣೋ, ನೀವು ಮರೆತುಹೋಗಿದ್ದೀರೆಂದು ಹೇಳುವುದಕ್ಕೆ ಬಂದರೆ ನಿನಗೆ ತಿಳಿದಿದೆಯಾ ಎಂದು ನನ್ನನ್ನೆ ಕೇಳುತ್ತೀರಾ"! ಎಂದು ಪಾಪ ಆ ಗುರು ಮುಟ್ಟಿದರೆ ಮುನಿ ಗಿಡದ ಜ್ಞಾನ ಶಿಷ್ಯರಿಗೊಪ್ಪಿಸಿದನು. ಅದನ್ನು ಕೇಳಿದ ಆ ಇಬ್ಬರು ಶಿಷ್ಯರು ಎಲ್ಲ ಸರಿಯಾಗಿದೆ ತಪ್ಪಿಲ್ಲದೆ ಹೇಳಿದ್ದೀಯ. ಈಗ ನಮ್ಮ ಗುರುವೇಯೆಂದು ನಿನ್ನನ್ನು ನಂಬುತ್ತೇವೆ. ಗುರುವಾಗಿ ಹೀಗೆ ದೆವ್ವದಂತೆ ಬದಲಾಗಿ ಬೇರೆಯವರಿಗೆ ಸೇರುತ್ತೀಯ! ಇನ್ನೊಬ್ಬರಿಗೆ ಹಿಡಿಯುವ ನೀನು ಗುರುವು ಹೇಗೆ ಆಗುತ್ತೀಯ ಹೀಗೆ ಬರುವುದಕ್ಕೆ ನಿನಗೆ ಬುದ್ಧಿಯಿದೆಯಾ" ಎಂದು ಜೋರಾಗಿ ಅರಚಿದರು. ಅವರು ಅರಚುವುದಕ್ಕೆ ಗುರುಗಳು ಭಯಪಟ್ಟು "ನನ್ನನ್ನು ಏನು ಅನ್ನಬೇಡಿ ಸ್ವಲ್ಪ ಮಾತನಾಡಲು ಅವಕಾಶ ಕೊಡಿ. ದೆವ್ವವಾದರೆ ನೀನು ಗುರುವೇಗೆ ಆಗುತ್ತೀಯೆಂದು ಕೇಳುತ್ತಿದ್ದೀರ ದೆವ್ವವಾದಾಗ ಗುರುವಾಗುತ್ತೇನೆಂದು ಹೇಳಿದ್ದೆನಾ ನಾನು ಬದುಕಿರುವಾಗಲೆ ಗುರು ಸತ್ತು ದೆವ್ವವಾದಾಗ ಇನ್ನು ಗುರುವಾಗುವುದೇನು ಇಲ್ಲ" ಎಂದನು. ಅಷ್ಟರಲ್ಲಿಯೆ ಉಳಿದ ಶಿಷ್ಯರೆಲ್ಲ ಅಲ್ಲಿ ಸೇರಿ ವಿಷಯವನ್ನೆಲ್ಲಾ

ತಿಳಿದುಕೊಂಡರು. ಎಷ್ಟು ಗುರುವಾದರೇನು ಹೀಗೆ ಮನುಷ್ಯರಿಗೆ ಹಿಡಿದರೆ ನಾವು ಗುರುವೆಂದು ಒಪ್ಪಿಕೊಳ್ಳುವುದಿಲ್ಲ ಎಂದು ಒಬ್ಬನಂದರೆ, ಹೊಗೆ ಹಾಕಿರಿ ಹೋಗಲಿ ಎಂದು ಒಬ್ಬನಂದರೆ, ಸತ್ತು ದೆವ್ವವಾಗಿದ್ದಾನೆಂದರೆ ನಿಜಗುರುವಾದರೆ ಹಾಗಾಗಬಾರದೆಂದು ಒಬ್ಬನಂದರೆ, ಮೊದಲು ಹೋಗುತ್ತೀಯಾ ಇಲ್ಲವೆಂದು ಒಬ್ಬನಂದರೆ ಹೀಗೆ ಪಾಪ ಗುರುಗಳ ಗುರುತ್ವವೆ ಸರಿಯಲ್ಲವೆಂಬ ಸ್ಥಿತಿಗೆ ಬಂದರು. ಶಿಷ್ಯರ ಮೇಲೆ ಆಗ ಗುರುಗಳಿಗೆ ಕೋಪ ಬಂದಿತು. "ಬಾಯಿ ಮುಚ್ಚಿರಿ ಕತ್ತೆಗಳಾ! ಅಸಲು ನೀವು ಮನುಷ್ಯರಾ? ನೀವು ಅಜ್ಞಾನದ ಕಡೆಗೆ ಹೋಗದಂತೆ ಜ್ಞಾನದ ಕಡೆ ಸಾಗಬೇಕೆಂದು ಅದಕ್ಕೆ ಬೇಕಾದ ಜ್ಞಾನ ಬಂಡಾರವನ್ನು ನಿಮಗೆ ಒದಗಿಸಬೇಕೆಂದು ನಾನೇ ಸ್ವತಃವಾಗಿ ಬಂದರೂ, ನಾನು ಇಂಥವನೆ ಯೆಂದರೂ, ನನ್ನನ್ನು ಹೀಯಾಳಿಸಿ ಮಾತನಾಡುತ್ತೀರ! ಜ್ಞಾನ ತಿಳಿಸುವುದನ್ನು ಅನುಸರಿಸಿ ಗುರುವೆಂದು ಹೇಳಿದೆನಾ ಇಲ್ಲವೆ ದೆವ್ವವಾಗಿ ಬದಲಾಗದೆ ಹೋದರೆ ಗುರುವಾಗುತ್ತೇನೆಂದು ಹೇಳಿದೆನಾ! ಇರುವಾಗ ಬೆಲೆ ತಿಳಿಯದೆ ಹೋದೆವೆಂದು ಅತ್ತಿದ್ದು ನೀವೆ, ಎದುರಿಗೆ ಬಂದರೆ ಹೊಡೆಯಿರಿ ಓಡಿಸಿರಿ ಅನ್ನುವುದು ನೀವೇನಾ! ಅಸಲು ನಿಮ್ಮ ಬಳಿ ನಾನು ಹೇಳಿದ ಜ್ಞಾನ ಸ್ವಲ್ಪವಾದರೂ ಇದೆಯಾ ಎಂದು ಬದುಕಿರುವಾಗ ಬೈದಂತೆ ಬೈದನು. ಈಗಲಾದರೂ ಗ್ರಹಿಸಿರಿ ನಾನು ನಿಮಗೆ ಪ್ರತಿಯೊಂದು ಅವಕಾಶ ಕೊಟ್ಟಿದ್ದೇನೆ. ಪ್ರತಿ ಅವಕಾಶವನ್ನು ಕೈ ಜಾರಿಸಿ ಕೊಂಡಿದ್ದೀರ. ಕೊನೆಗೆ ಹೀಗಾದರೂ ಹತ್ತಿರವಾಗಿರಬೇಕೆಂದು ನಾನೇ ಬಂದಿದ್ದೇನೆ. ಆದರೂ ಈ ಅವಕಾಶವನ್ನು ಸಹ ಕೈಬಿಟ್ಟಿದ್ದೀರ. ಈ ವಿಧವಾಗಿ ಸಹ ನಾನು ಎಂದಿಗೂ ಬರುವುದಿಲ್ಲ, ನನ್ನ ಮಾತುಗಳು ನೀವು ಕೇಳುವುದಿಲ್ಲ. ಆದರೇ ನನ್ನ ಬಳಿಗೆ ಸೇರುವುದಕ್ಕೆ ನಿಮಗೆ ಒಂದು ಮುಖ್ಯವಿಷಯ ತಿಳಿಸುತ್ತಿದ್ದೇನೆ ನನಗೆ ತಿಳಿದ ಜ್ಞಾನವನ್ನೆಲ್ಲ ಬರೆದ ಪುಸ್ತಕವನ್ನು ಕೊನೆಯದಾಗಿ ನಿಮಗೆ ಕೊಡಬೇಕೆಂದುಕೊಂಡಿದ್ದೇನೆ. ದುರದೃಷ್ಟವಂತರು ಸಮಯಕ್ಕೆ ನನ್ನ ಬಳಿಗೆ ಯಾರು ಬಾರದೆ ಹೋದಿರಿ. ಆ ಪುಸ್ತಕ ಇಂತಹ ಜಾಗದಲ್ಲಿದೆ. ಅದನ್ನು ತೆಗೆದುಕೊಂಡು ಪೂರ್ತಿ ಜ್ಞಾನ ತಿಳಿದು ಬದುಕಿರಿ ಇನ್ನು ನಾನಾಗಿ ಬರುವುದಿಲ್ಲ" ಎಂದು ಹೇಳಿ ಮರೆಯಾದನು. ಆಗ ಶಿಷ್ಯರೆಲ್ಲ ಎಚ್ಚರಗೊಂಡು ತಕ್ಷಣವೆ

ಗುರುವು ಹೇಳಿದ ಜಾಗಕ್ಕೆ ಹೋಗಿ ಆ ಪುಸ್ತಕವನ್ನು ತೆಗೆದು ನೋಡಿದರು. ಅದು ಕೇವಲ ಬಿಳಿ ಕಾಗದಗಳ ಪುಸ್ತಕ ಹೊರತು ಅದರಲ್ಲಿ ಯಾವ ಬರವಣಿಗೆ ಇಲ್ಲ. ಆಗಲು ಸಹ ಗುರುವಿನ ಮೇಲೆ ವಿಶ್ವಾಸವಿಲ್ಲದ ಕೆಲವರು ಗುರು ಎಷ್ಟು ಮೋಸಗಾರ ಎಂದು ಮನಸ್ಸಿನಲ್ಲಿ ಅಂದುಕೊಂಡರು. ಅದರಲ್ಲಿ ಒಬ್ಬ ಶಿಷ್ಯನು ಯೋಚಿಸಿ ಗುರು ನಮಗೆ ಒಳ್ಳೆಯದನ್ನು ಕೋರಿ ಪುಸ್ತಕವಿದೆಯೆಂದು ಹೇಳಿದ್ದಾನೆ. ಮೋಸಗಾರನಾದರೆ ಅಸಲು ಈ ಪುಸ್ತಕದ ವಿಷಯ ಹೇಳುವವನೆ ಅಲ್ಲ ತಾನೆ! ಇದರಲ್ಲಿ ನಮ್ಮಲ್ಲಿಯೆ ಲೋಪವಿದೆಯೆಂದು ಎಲ್ಲರಿಗು ಹೇಳಿ ಭಕ್ತಿಯಿಂದ ಎಲ್ಲರೂ ಗುರುವನ್ನು ಬೇಡಿಕೊಂಡು ತಮ್ಮ ಅಜ್ಞಾನವನ್ನು ಕ್ಷಮಿಸಿ ತಮ್ಮನ್ನು ದಯೆಯಿಂದ ನೋಡಿ ಆ ಪುಸ್ತಕದ ವಿವರ ತಿಳಿಸೆಂದು ಕೋರಿದರು. ಅಷ್ಟರಲ್ಲಿ ಒಬ್ಬ ವೃದ್ಧನು ಅಲ್ಲಿಗೆ ಬಂದನು ನೀವು ಏನೋ ಚಿಂತಾಕಾಂತರಾಗಿ ಇದ್ದಂತಿದೆ ಎಂದು ಕೇಳಿದನು. ಆ ಶಿಷ್ಯರು ವಿವರವನ್ನೆಲ್ಲ ಹೇಳಿ ಬಾಧೆಪಟ್ಟರು. ಎಲ್ಲ ಕೇಳಿದರೆ ನಿಮಗೆ ಗುರುವಿನ ಮೇಲಿರುವ ಭಕ್ತಿಗಿಂತ ನಿಮ್ಮ ಗುರುವಿಗೆ ಶಿಷ್ಯರ ಮೇಲಿರುವ ಪ್ರೇಮವೆ ಹೆಚ್ಚಾಗಿದೆ! ಸರಿ ಪ್ರಾರ್ಥಿಸಿರಿ. ಯಾರೊಳಗೊ ಒಬ್ಬರೊಳಗೆ ಬಂದು ಪುಸ್ತಕ ವಿವರ ಹೇಳಿ ಹೋಗುತ್ತಾನೆ ಎಂದನು. ಏಳು ಜನ ಶಿಷ್ಯರು ಎಷ್ಟು ಪ್ರಾರ್ಥಿಸಿದರೂ ಗುರುವು ಬರಲಿಲ್ಲ. ಆಗ ಆ ಮುದುಕನು ಸರಿ ನಿಮ್ಮ ಗುರುವಿಗೆ ನಿಮ್ಮ ಮೇಲೆ ಪ್ರೇಮ ಕಡಿಮೆಯಾದಂತಿದೆ ಆದ್ದರಿಂದ ಬರಲಿಲ್ಲ. ಆ ಪುಸ್ತಕ ಕೊಡಿ ನಾನು ನೋಡಿ ಕೊಡುತ್ತೇನೆಂದನು. ಹಾಗೆ ಹೇಳಿದಂತೆ ಆ ಶಿಷ್ಯರು ಆ ಖಾಲಿ ಪುಸ್ತಕವನ್ನು ಕೊಟ್ಟರು. ಆ ಖಾಲಿ ಪುಸ್ತಕದಲ್ಲಿನ ಕಾಗದಗಳನ್ನು ತಿರುವಿ ನೋಡಿ, ಇದರಲ್ಲಿ ನಿಮ್ಮ ಗುರುಗಳು ಬರೆದಿಟ್ಟ ಜ್ಞಾನವೆಲ್ಲ ಇದೆ ಎಂದನು. ಶಿಷ್ಯರಿಗೆ ಏನೂ ಅರ್ಥವಾಗಲಿಲ್ಲ. ಖಾಲೀ ಪುಸ್ತಕದಲ್ಲಿ ಎಲ್ಲಿದೆಯಯ್ಯಾ ಜ್ಞಾನವೆಂದರು. ಅದಕ್ಕೆ ಆ ಮುದುಕನು ನಕ್ಕು "ಇದು ನಿಮ್ಮ ಕಣ್ಣಿಗೆ ಖಾಲೀ ಪುಸ್ತಕವೇ ನನ್ನ ಕಣ್ಣುಗಳಿಗೆ ಜ್ಞಾನ ಲಿಖಿತ. ನಿಮ್ಮ ಕಣ್ಣಿಗು ಸಹ ಇದರಲ್ಲಿನ ಜ್ಞಾನ ಕಾಣಿಸಬೇಕೆಂದರೆ ಇದರ ವಿವರ ಹೇಳುತ್ತೇನೆ ಕೇಳಿರಿ. ಇದು ಒಂದು ರಸಾಯನದಿಂದ ಬರೆಯಲಾಗಿದೆ ಆದ್ದರಿಂದ ಪೇಪರಿನ ಮೇಲೆ ಅಕ್ಷರಗಳು ಕಾಣಿಸುತ್ತಿಲ್ಲ. ಈ ಕಾಗದಗಳನ್ನು ನೀರಿನಲ್ಲಿ ತೋಯಿಸಿದರೆ ಅದರಲ್ಲಿನ

ಬರವಣಿಗೆಯೆಲ್ಲ ಹೊಳೆಯುವಂತೆ ಕಾಣಿಸುತ್ತದೆಂದು ಹೇಳಿದನು. ಶಿಷ್ಯರು ಹಾಗೇ ಮಾಡಿದರು. ನೀರಿನ ಒದ್ದೆಯಲ್ಲಿ ಆ ಪುಸ್ತಕದ ಬರವಣಿಗೆಯೆಲ್ಲ ಹೊಳಪಿನಿಂದ ಕಾಣಿಸಿತು. ಪುಸ್ತಕದ ಹೆಸರು ದೊಡ್ಡದಾಗಿ "ಲೋಳೆಸರದಿಂದ ಮುಟ್ಟಿದರೆ ಮುನಿಗೆ" ಅನ್ನುವುದು ಕಾಣಿಸಿತು. ಆಗ ಆ ಮುದುಕನು ನಗುತ್ತಾ ಇರುವ ಪುಸ್ತಕದಲ್ಲಿನ ಅಕ್ಷರಗಳು ತಿಳಿಯದವರಿಗೆ ನಾನು ತೋರಿಸಿದರೆ ಅದನ್ನು ನೋಡುವ ವಿಧಾನ ತಿಳಿದ ಹಾಗೆ ಜೀವನದಲ್ಲಿ ಜ್ಞಾನ ತಿಳಿಯದವರಿಗೆ ಇದು ಜ್ಞಾನವೆಂದು ಗುರು ತೋರಿಸಿದರೆ ಮಾತ್ರ ಮನುಷ್ಯರಿಗೆ ಅದು ಏನೆಂದು ತಿಳಿಯುವುದು. ಆದ್ದರಿಂದ ಪ್ರತಿಯೊಬ್ಬರಿಗೂ ಗುರು ಅವಶ್ಯ. ಗುರು ಅವಶ್ಯವೆಂದು ಏಳು ಜನ ಶಿಷ್ಯರ ಹಾಗೆ ಗುರುವನ್ನು ಇಟ್ಟುಕೊಳ್ಳಬಾರದು. ಅವರಿಗಿಂತ ಮಿಗಿಲಾದ ಗುರುವಿನ ಬಗ್ಗೆ ಒಳ್ಳೆಯ ಭಾವನೆಯನ್ನು ಇಟ್ಟುಕೊಳ್ಳಬೇಕು.

# ತೃಪ್ತಿ – ಅಸಂತೃಪ್ತಿ

ಒಂದು ಊರಿನಲ್ಲಿ ನಾಯಿ, ಬೆಕ್ಕು ಎರಡು ಸ್ನೇಹದಿಂದಿದ್ದವು. ನಾಯಿ ಪ್ರತಿದಿನ ಮಾಂಸದ ಮಾರ್ಕೆಟಿಗೆ ಹೋಗಿ ಅಲ್ಲಿ ದೊರಕಿದ ಮಾಂಸದ ತುಣುಕುಗಳು ತಿಂದು ಹೊಟ್ಟೆ ತುಂಬಿಸಿಕೊಳ್ಳುತ್ತಿತ್ತು. ಬೆಕ್ಕು ಮನೆಯಲ್ಲಿಯೆ ಇದ್ದು ಕಾಣಿಸುತ್ತಿದ್ದ ಇಲಿಗಳನ್ನು ಬೇಟೆಯಾಡಿ ತಿನ್ನುತ್ತಿತ್ತು. ಒಂದು ದಿನ ನಾಯಿ ಬೆಕ್ಕಿನೊಂದಿಗೆ ಹೀಗೆ ಹೇಳಿತು. "ಪ್ರತಿದಿನ ಇಲಿಗಳನ್ನು ನೀನು ಬೇಟೆಯಾಡುತ್ತಿದ್ದೀಯ. ಆ ಮಾತಿಗೆ ಬಂದರೆ ಬೇಟೆ ನನ್ನ ಸ್ವಭಾವ. ಆದರೆ ನಾನು ಯಾವೊಂದು ದಿನವೂ ಸಹ ಬೇಟೆಯಾಡಲಿಲ್ಲ. ಮಾರ್ಕೆಟಿನ ಪಕ್ಕದಲ್ಲಿ ಬಿದ್ದ ಮಾಂಸದ ತುಣುಕುಗಳು ತಿಂದು ಬರುತ್ತಿದ್ದೇನೆ. ನೀನು ಮಾತ್ರ ಮ್ಯಾವ್ ಮ್ಯಾವ್ ಎಂದು ಅರಚುತ್ತಾ ಯಜಮಾನರಿಂದ ಮೊಸರನ್ನ ತಿನ್ನುತ್ತಿದ್ದೀಯ, ಸಮಯ ಸಿಕ್ಕಾಗ ಬೇಟೆಯಾಡುತ್ತಿದ್ದೀಯ. ನಾನು ಅರಚಿದರು ಇಡುವವರಿಲ್ಲ. ಬೇಟೆಯಾಡಲು ಅವಕಾಶವಿಲ್ಲ, ಸಿಕ್ಕಿದ್ದು ತಿಂದು ಸುಮ್ಮನಿರಬೇಕು. ನಾನು ಭೌ ಭೌ ಎಂದು ಬೊಗಳಿದರು ನನ್ನನ್ನು ಕಲ್ಲುಗಳಿಂದ ಹೊಡೆಯುವ ವರಿದ್ದಾರೆ.

ಅನ್ನ ಇಡುವವರಿಲ್ಲ. ನಾವು ಒಳ್ಳೆಯ ಸ್ನೇಹಿತರು ಆದ್ದರಿಂದ ನೀನು ನನಗೆ ಒಂದು ಸಹಾಯ ಮಾಡಿ ಇಡು. ಅದು ಏನೆಂದರೆ! ನೀನು ಮಾರ್ಕೆಟಿಗೆ ಹೋಗಿ ಮಾಂಸದ ತುಣುಕುಗಳು ತಿನ್ನು. ನಾನು ಮನೆಯಲ್ಲಿಯೆ ಇದ್ದು ಇಲಿಗಳನ್ನು ಬೇಟೆಯಾಡಿ ತಿನ್ನುತ್ತೇನೆ. ಹಾಗಾದರೂ ಬೇಟೆಯಾಡುವ ಅವಕಾಶ ಕೆಲವು ದಿನಗಳು ನನಗೆ ಸಿಗುವಂತೆ ಮಾಡು." ಹಾಗೆ ನಾಯಿ ಬೆಕ್ಕು ಮಾತನಾಡಿಕೊಂಡು ಕೆಲಸಗಳನ್ನು ಬದಲಾಯಿಸಿಕೊಂಡವು. ಆ ದಿನದಿಂದ ಬೆಕ್ಕು ಮಾರ್ಕೆಟಿಗೆ ಹೋಯಿತು. ನಾಯಿ ಮನೆಯಲ್ಲಿಯೆ ಉಳಿಯಿತು. ಮಾರ್ಕೆಟಿಗೆ ಹೋದ ಬೆಕ್ಕು ತನ್ನ ಸ್ವಭಾವದ ಪ್ರಕಾರ ಪಕ್ಕದಲ್ಲಿ ಹೊಂಚುಹಾಕಿ ಕೊಂಡು ಮಾಂಸದ ತುಣುಕು ಪಕ್ಕದಲ್ಲಿ ಬೀಳುತ್ತಿದ್ದ ಹಾಗೆ ಎಗರಿ ಅದರ ಮೇಲೆ ದುಮುಕಿ ಬಾಯಿಯಲ್ಲಿ ಕಚ್ಚಿಕೊಂಡಿತು. ಪ್ರತಿ ದಿನ ಓಡಾಡುವುದು ಕಾಣಿಸದಂತೆ ಅಲ್ಲಿಯೆ ಇದ್ದು ಬಿದ್ದ ತುಣುಕನ್ನು ಸಮಯ ನೋಡಿ ಯಾರಿಗು ತಿಳಿಯದಂತೆ ನಾಯಿ ತಿನ್ನುತ್ತಿತ್ತು, ಆದ್ದರಿಂದ ಅದರ ಬಗ್ಗೆ ಯಾರೂ ತಲೆಕೆಡಿಸಿಕೊಳ್ಳಲಿಲ್ಲ. ಆ ದಿನ ಬೆಕ್ಕು ಎಗರಿ ದುಮುಕುವುದನ್ನು ಅಲ್ಲಿದ್ದವರೆಲ್ಲ ಗಮನಿಸಿ ಅದನ್ನು ಹೊಡೆದೋಡಿಸಿದರು.

ಮನೆಯಲ್ಲಿ ನಾಯಿ ಇಲಿಗಳಿಗಾಗಿ ಹೊಂಚುಹಾಕಿಕೊಂಡು ಇಲಿ ಕಾಣಿಸುತ್ತಲೆ ಅದರ ಮೇಲೆ ಎಗರಲು ಹೋಗಿ ಸೋರೆಗಳನ್ನು ಕೆಳಗೆ ಬೀಳಿಸಿತು. ಕೆಳಗೆ ಬಿದ್ದ ಸೋರೆಗಳು ಒಡೆದು ಹೋದವು. ಪ್ರತಿದಿನ ಬೆಕ್ಕು ಇಲಿಗಳನ್ನು ಹಿಡಿದರು ಯಾವ ಸೋರೆಯನ್ನು ಒಡೆಸದೆ ಅತಿ ಬುದ್ಧಿವಂತಿಕೆಯಿಂದ ಹಿಡಿದುಕೊಳ್ಳುತ್ತಿತ್ತು. ಆದ್ದರಿಂದ ಅದನ್ನು ಕುರಿತು ಮನೆಯವರು ತಲೆಕೆಡಿಸಿ ಕೊಳ್ಳುತ್ತಿರಲಿಲ್ಲ. ಆ ದಿನ ಸೋರೆಗಳು ಒಡೆದಿರುವುದರಿಂದ ನಾಯಿಯನ್ನು ಹೊಡೆದೋಡಿಸಿದರು. ಒದೆಗಳು ತಿಂದ ನಾಯಿ, ಬೆಕ್ಕು ಒಂದು ಕಡೆ ಸೇರಿ ತಾವು ತಿಂದ ಒದೆಗಳನ್ನು ಒಬ್ಬರಿಗೊಬ್ಬರು ಹೇಳಿಕೊಂಡವು. ಇನ್ನು ಮೇಲೆ ಯಾರ ಸ್ಥಾನದಲ್ಲಿ ಅವರಿದ್ದು, ಯಾರ ಕೆಲಸ ಅವರು ಮಾಡಿಕೊಳ್ಳುವುದು ಒಳ್ಳೆಯದೆಂದುಕೊಂಡವು. ಭೂಮಿ ಮೇಲೆ ಯಾರಿಗೇನು ಕೆಲಸವಿದೆಯೋ ಅದನ್ನು ಮಾಡಿಕೊಂಡು ದೊರಕಿದ ಲಾಭದಿಂದ ತೃಪ್ತಿ ಪಡುವುದು ಒಳ್ಳೆಯದು.

# ಯೋಗ ಕ್ಷೇಮಗಳು

ಒಂದು ಊರಿನಲ್ಲಿ ಒಂದು ಬ್ರಾಹ್ಮಣ ಕುಟುಂಬವಿದ್ದಿತು. ಅದರಲ್ಲಿ ಇಬ್ಬರು ಅಣ್ಣತಮ್ಮಂದಿರಿದ್ದಾರೆ. ದೊಡ್ಡವನ ಹೆಸರು ರಾಮಬ್ರಹ್ಮ, ಎರಡನೆಯವನ ಹೆಸರು ವಿಷ್ಣು ಬ್ರಹ್ಮ. ಇವರಿಬ್ಬರು ಚಿಕ್ಕಂದಿನಿಂದ ಎಲ್ಲ ವಿದ್ಯೆಗಳಲ್ಲಿ ನಿಪುಣರುಣರು. ಬ್ರಾಹ್ಮಣರಿಗೆ ಮುಖ್ಯವಾದ ಬ್ರಹ್ಮವಿದ್ಯೆಯಲ್ಲಿಯು ಸಹ ಇಬ್ಬರು ಪ್ರಾವೀಣ್ಯತೆಯನ್ನು ಸಂಪಾದಿಸಿದ್ದರು. ಎಲ್ಲ ವಿದ್ಯೆಗಳು ಸಮಾನವಾಗಿ ಕಲಿತಿದ್ದರೂ ಒಂದು ಬ್ರಹ್ಮವಿದ್ಯೆಯಲ್ಲಿ ಸ್ವಲ್ಪ ಅಭಿಪ್ರಾಯಬೇಧ ಹೊಂದಿದ್ದರು. ತಂದೆ ಸತ್ತುಹೋದ ನಂತರ ಇಬ್ಬರೂ ಬೇರೆಯಾಗಿ ಬೇರೆ ಬೇರೆ ಸಂಸಾರಗಳನ್ನು ಇಟ್ಟುಕೊಂಡರು. ಇಬ್ಬರೂ ಭಗವದ್ಗೀತೆಯಲ್ಲಿ ಪ್ರಾವೀಣ್ಯತೆ ಹೊಂದಿದವರೆ. ಭಗವದ್ಗೀತೆಯಲ್ಲಿನ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 22ನೇ ಶ್ಲೋಕವನ್ನು "ಅನನ್ಯಾಶ್ಚಿನ್ತಯನ್ತೋ *ಮಾಂ ಯೇ ಜನಾಃ ಪರ್ಯುಪಾಸತೆ, ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್*" ನಿತ್ಯವೂ ಪಠಿಸುತ್ತಿದ್ದರು. ದೊಡ್ಡವನಾದ ರಾಮಬ್ರಹ್ಮ ಈ ಶ್ಲೋಕವನ್ನು ಪೂರ್ತಿ ವಿಶ್ವಸಿಸಿದವನಾಗಿ ತಮ್ಮವೊಂದು ಯೋಗವನ್ನಾಗಲಿ ಕ್ಷೇಮವನ್ನಾಗಲಿ ದೇವರೆ ನೋಡಿಕೊಳ್ಳುತ್ತಾನೆಂದು ನಂಬಿದ್ದರು. ಚಿಕ್ಕವನಾದ ವಿಷ್ಣುಬ್ರಹ್ಮ ಹಾಗಲ್ಲದೆ ಅನ್ಯಚಿಂತೆಯಿಲ್ಲದೆ ದೇವರ ಮೇಲೆ ವಿಶ್ವಾಸವಿರಿಸಿ ಆರಾಧಿಸಿದವನನ್ನು ಯೋಗ ಭ್ರಷ್ಟನು ಆಗದೆ ದೇವರೆ ಕಾಪಾಡುವ ನೆಂದು ನಂಬಿದ್ದನು. ಈ ವಿಧವಾಗಿ ಇಬ್ಬರು ಈ ಶ್ಲೋಕದ ಮೇಲೆ ಭಿನ್ನ ಅಭಿಪ್ರಾಯಗಳು ಹೊಂದಿದ್ದರು.

ಒಂದು ದಿನ ಇಬ್ಬರು ದೈವದರ್ಶನಕ್ಕೆ ಹೋಗಬೇಕೆಂದುಕೊಂಡು ದೊಡ್ಡವನು ತಿರುಪತಿಗೆ, ಚಿಕ್ಕವನು ಶ್ರೀಶೈಲಕ್ಕೆ ಹೊರಟು ಹೋದರು. ತಿರುಪತಿಗೆ ಹೋದ ದೊಡ್ಡವನು ರಾಮಬ್ರಹ್ಮ ಕಾಲ್ನಡಿಗೆಯಲ್ಲಿ ಏಳು ಬೆಟ್ಟಗಳನ್ನತ್ತಿ ದೈವದರ್ಶನಕ್ಕೆ ಹೋಗಬೇಕೆಂದುಕೊಂಡನು. ಈ ವಿಧವಾಗಿ ತಿರುಪತಿಯಿಂದ ತಿರುಮಲಕ್ಕೆ ಹೋಗುತ್ತಿರುವಾಗ ಕಾಲುದಾರಿ ಬೆಟ್ಟ ಪ್ರಾಂತ, ಕಾಡು ಆಗಿರುವುದರಿಂದ ಒಂದು ಹಾವು ರಾಮಬ್ರಹ್ಮನನ್ನು ಕಚ್ಚಿತು. ಅದರಿಂದ ರಾಮಬ್ರಹ್ಮ ಬಹಳ ಭಯಪಟ್ಟು ಹೋದನು. ಅದು ಕಚ್ಚಿರುವುದರಿಂದ ತಾನು

ಸತ್ತುಹೋಗುವುದು ಖಾಯಮೆಂದುಕೊಂಡನು. ತಿರುಪತಿಗೆ ಬಾರದೆ ಮನೆಯಲ್ಲಿಯೆ ಇದ್ದಿದ್ದರೆ ಚೆನ್ನಾಗಿರುತ್ತಿತ್ತು. ಇಲ್ಲಿಗೆ ಬಂದು ಪ್ರಾಣಕ್ಕೆ ತಂದುಕೊಂಡೆನೆಂದುಕೊಂಡನು. ಹಾವು ಕಚ್ಚಿದ್ದರಿಂದ ಭಯಪಟ್ಟ ರಾಮಬ್ರಹ್ಮ ತನ್ನ ಕ್ಷೇಮವನ್ನು ಸಹ ದೇವರೆ ನೋಡಿಕೊಳ್ಳುತ್ತಾನೆಂದು ಅಂದುಕೊಳ್ಳದೆ ತನ್ನ ಕ್ಷೇಮವನ್ನು ತಾನೇ ನೋಡಿಕೊಳ್ಳಬೇಕೆಂದುಕೊಂಡನು. ಅಷ್ಟರಲ್ಲಿಯೆ ಬಾಯಿಯಲ್ಲಿ ನೊರೆ ಬರಲು ಪ್ರಾರಂಭಿಸಿತು. ಅದರಿಂದ ಮತ್ತಷ್ಟು ಭಯಪಟ್ಟು "ಯೋಗಕ್ಷೇಮಮ್ ವಹಾಮ್ಯಹಮ್" ಎಂಬ ಮಾತು ಪೂರ್ತಿ ಅಸತ್ಯ. ಈ ವಿಷಯದಲ್ಲಿ ತನ್ನ ತಮ್ಮನು ಹೇಳುವ ಮಾತೆ ವಾಸ್ತವವೆಂದುಕೊಂಡನು. ಅಷ್ಟರಲ್ಲಿಯೆ ಆತನ ಪರಿಸ್ಥಿತಿಯನ್ನು ನೋಡಿದ ಒಬ್ಬ ದಾರಿಹೋಕ ತನಗೆ ಹಾವು ಕಚ್ಚಿರುವುದಕ್ಕೆ ವೈದ್ಯ ಮಾಡುವುದು ಗೊತ್ತಿದೆಯೆಂದು ರಾಮಬ್ರಹ್ಮನಿಗೆ ಧೈರ್ಯ ಹೇಳಿ ಯಾವುದೊ ಗಿಡದ ಎಲೆಯ ರಸವನ್ನು ಆತನಿಗೆ ಕುಡಿಸಿದನು. ಅಷ್ಟಕ್ಕೆ ಹಾವಿನ ವಿಷ ಕಡಿಮೆಯಾಗಿ ಬಾಯಿಯಲ್ಲಿನ ನೊರೆ ಕಡಿಮೆಯಾಯಿತು. ಅರ್ಧ ಗಂಟೆಗೆ ತನ್ನಲ್ಲಿ ಹಾವಿನ ವಿಷ ಪೂರ್ತಿ ಕಡಿಮೆಯಾಗಿದೆಯೆಂದು ತಿಳಿದುಕೊಂಡ ರಾಮಬ್ರಹ್ಮ ದೇವರೆ ತನ್ನನ್ನು ರಕ್ಷಿಸಿದ್ದಾನೆಂದು ಇಲ್ಲದೆ ಹೋಗಿದ್ದರೆ ಸತ್ತುಹೋಗುತ್ತಿದ್ದೆನೆಂದು ಅಂದುಕೊಂಡನು. ಅಷ್ಟಕ್ಕೆ ತನ್ನನ್ನು ನಂಬಿದವರ ಯೋಗಕ್ಷೇಮಗಳನ್ನು ದೇವರೆ ನೋಡುತ್ತಾನೆ ಆದ್ದರಿಂದಲೆ ಯಾರೊ ಸಮಯಕ್ಕೆ ಬಂದು ವೈದ್ಯ ಮಾಡಿದ್ದಾರೆಂದು "ಯೋಗಕ್ಷೇಮಮ್ ವಹಾಮ್ಯಹಮ್" ಎಂಬ ಮಾತು ಪೂರ್ತಿ ಸತ್ಯವೆಂದುಕೊಂಡನು. ದಾರಿಯಲ್ಲಿ ಹಾವುಕಚ್ಚಿದಕ್ಕೆ ಔಷಧಿ ಕೊಟ್ಟವನು ಪರಿಚಯವಾದನು. ಅವನು ಸಹ ತಿರುಮಲಕ್ಕೆ ವೆಂಕಟೇಶ್ವರ ಸ್ವಾಮಿ ದರ್ಶನಕ್ಕೆ ಬರುವವನೆ ಆದ್ದರಿಂದ ಇಬ್ಬರೂ ಸೇರಿ ಬೆಟ್ಟ ಹತ್ತಿಹೋದರು. ಇಬ್ಬರು ಸೇರಿ ತಿರುಮಲದಲ್ಲಿ ಊಟ ಮಾಡಿದರು. ಇಬ್ಬರು ಸೇರಿ ಮರುದಿನ ದೈವದರ್ಶನ ಸಹ ಮಾಡಿಕೊಂಡರು. ರಾತ್ರಿ ಆಗಿರುವುದರಿಂದ ಇಬ್ಬರು ಸೇರಿ ಒಂದು ರೂಮನ್ನು ಬಾಡಿಗೆಗೆ ತೆಗೆದುಕೊಂಡು ಮಲಗಿಕೊಂಡರು. ಬೆಳಗ್ಗೆ ಎದ್ದು ನೋಡುವಷ್ಟರಲ್ಲಿ ತನ್ನ ಜೊತೆಗಿದ್ದವನು ಕಳ್ಳನೆಂದು, ತನ್ನ ಮೂಟೆಯನ್ನು ಕಳ್ಳತನ ಮಾಡಿದ್ದಾನೆಂದು ರಾಮಬ್ರಹ್ಮ ತಿಳಿದುಕೊಂಡನು. ತನ್ನ ಬಳಿ ಒಂದು

ಪೈಸಾ ಸಹ ಇಲ್ಲ. ಇದ್ದ ಹಣವೆಲ್ಲವೂ ಮೂಟೆಯಲ್ಲಿಯೆ ಇದೆ. ತಿರುಗು ಪ್ರಯಾಣಕ್ಕೆ ಸ್ವಲ್ಪವಾದರೂ ಹಣವಿಲ್ಲ. ಹೇಗೆ ಮನೆ ಸೇರಬೇಕೆಂದುಕೊಂಡನು. ಮತ್ತೆ ಭಗವದ್ಗೀತೆ ಶ್ಲೋಕದಲ್ಲಿನ ಯೋಗಕ್ಷೇಮವೆನ್ನುವ ಮಾತು ಜ್ಞಾಪಕಕ್ಕೆ ಬಂದಿತು. ಈ ಬಾರಿ ತನ್ನನ್ನು ಕ್ಷೇಮವಾಗಿ ಊರು ಸೇರಿಸಿದರೆ ಸಾಕೆಂದು ದೇವರನ್ನು ಪ್ರಾರ್ಥಿಸಿಕೊಂಡನು.

ಕಾಲ್ನಡಿಗೆಯಲ್ಲಿ ಪ್ರಯಾಣ ಮಾಡಿ ತಿರುಪತಿ ರೈಲ್ವೇ ಸ್ಟೇಷನ್ ಸೇರಿಕೊಂಡ ರಾಮಬ್ರಹ್ಮ ತಾನು ಹೇಗೆ ಊರು ಸೇರಬೇಕೆಂದು ಚಿಂತಿಸತೊಡಗಿ ದನು. ಕೊನೆಗೆ ಏನು ಮಾಡುವುದಿಲ್ಲವೆಂದುಕೊಂಡು ಟಿಕೆಟ್ ಇಲ್ಲದೆ ರೈಲು ಹತ್ತಿದನು. ಎಂದೂ ಟಿಕೆಟ್ ಇಲ್ಲದೆ ಪ್ರಯಾಣ ಮಾಡದ ರಾಮಬ್ರಹ್ಮ ಮನಸ್ಸಿನಲ್ಲಿ ದೇವರನ್ನು ಪ್ರಾರ್ಥಿಸುತ್ತಲೆ ಇದ್ದಾನೆ. ಅಷ್ಟರಲ್ಲಿ ರೈಲು ಸ್ಟೇಷನ್ ಬಿಟ್ಟು ಹೊರಟಿತು. ಸ್ವಲ್ಪ ಹೊತ್ತಿಗೆ ಟಿಕೆಟ್ ಚೆಕಿಂಗ್‌ಗೆ ಟಿಕೆಟ್ ಕಲೆಕ್ಟರ್ ಬಂದನು. ಎಲ್ಲರನ್ನು ಟಿಕೆಟ್ ಕೇಳುತ್ತಾ ಬಂದು ರಾಮಬ್ರಹ್ಮನನ್ನು ಸಹ ಟಿಕೆಟ್ ಕೇಳಿದನು. ರಾಮಬ್ರಹ್ಮನ ಹತ್ತಿರ ಟಿಕೆಟ್ ಇಲ್ಲವೆಂದು ತಿಳಿದುಕೊಂಡ ಟಿಕೆಟ್ ಕಲೆಕ್ಟರ್ ರಾಮಬ್ರಹ್ಮನು ಎಷ್ಟು ಹೇಳಿಕೊಂಡರೂ ಕೇಳದೆ ಪಕ್ಕದ ಸ್ಟೇಷನ್‌ನಲ್ಲಿ ಇಳಿಸಿದನು. ರಾಮಬ್ರಹ್ಮನಿಗೆ ತಿನ್ನುವುದಕ್ಕೆ ತಿಂಡಿ ಇಲ್ಲ, ಪ್ರಯಾಣಿಸುವುದಕ್ಕೆ ಹಣವಿಲ್ಲ. ದೇವರು ಕಾಪಾಡಲಿಲ್ಲ. ತಾನು ಮಾಡುವುದೇನಿಲ್ಲದೆ ಒಂದೊಂದು ಊರು ಪ್ರಯಾಣಿಸುತ್ತ, ಆ ಊರಿನಲ್ಲಿ ಬಿಕ್ಷಾಟನೆ ಮಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತಾ ದಾರಿ ಸಾಗಿಸುತ್ತ ಒಂದು ತಿಂಗಳಿಗೆ ಸ್ವಂತ ಊರನ್ನು ಸೇರಿಕೊಂಡನು. ಈ ಬಾರಿ ಗೀತೆಯಲ್ಲಿನ ಶ್ಲೋಕದವೊಂದರ ಸಾರಾಂಶ ಅಸತ್ಯವೆಂದು ದೇವರು ತನ್ನ ಕ್ಷೇಮವನ್ನು ನೋಡಲಿಲ್ಲವೆಂದು ಕೊಂಡನು. ಈ ವಿಷಯವನ್ನು ತನಗಿಂತ ಚಿಕ್ಕವನಾದ ವಿಷ್ಣುಬ್ರಹ್ಮ ಹೇಳುತ್ತಿದ್ದನೆಂದು ಆತನೊಂದಿಗೆ ಈ ವಿಷಯವನ್ನು ಚರ್ಚಿಸುವುದಕ್ಕೆ ಹೋದನು.

ಚಿಕ್ಕವನಾದ ವಿಷ್ಣು ಬ್ರಹ್ಮನು ಸಹ ಶ್ರೀಶೈಲ ಯಾತ್ರೆಗೆ ಹೋಗಿ ಬಂದನು. ತಾನು ಮೊದಲಿನಿಂದ ದೇವರು ಯಾವನ ಕ್ಷೇಮ ನೋಡುವವನಲ್ಲ ಎಂದು ವಾದಿಸುತ್ತ ಇರುತ್ತಿದ್ದನು. ಆದ್ದರಿಂದ ಶ್ರೀಶೈಲ ಯಾತ್ರೆಯಲ್ಲಿ ತನಗೆ ಎಷ್ಟು

ಕಷ್ಟಗಳು ಬಂದರೂ ಅವೆಲ್ಲವೂ ಸಹಜವಾಗಿ ಬರುವಂತವುಗಳೆಂದು ಅಂದುಕೊಂಡನು. ಕಷ್ಟಗಳಿಗೆ ದೇವರಿಗೆ ಸಂಬಂಧವಿಡಲಿಲ್ಲ. ತನ್ನ ಯಾತ್ರೆಯನ್ನು ಮುಗಿಸಿಕೊಂಡು ಮನೆಗೆ ಬಂದ ವಿಷ್ಣುಬ್ರಹ್ಮನೊಂದಿಗೆ ಅಣ್ಣ ರಾಮಬ್ರಹ್ಮ ಸೇರಿ ತನ್ನ ಅನುಭವವೆಲ್ಲವನ್ನು ತಿಳಿಸಿದನು. ಅನ್ಯಚಿಂತೆ ಇಲ್ಲದೆ ನಾನು ದೇವರನ್ನು ಆರಾಧಿಸುತ್ತಿದ್ದೇನೆ ನನ್ನ ಕ್ಷೇಮವನ್ನು ದೇವರು ನೋಡಲಿಲ್ಲ. ಆಗಿರುವಾಗ ಗೀತೆಯಲ್ಲಿನ ಶ್ಲೋಕ ವ್ಯರ್ಥವಲ್ಲವೆ! ವ್ಯರ್ಥವಾದ, ನಿರೂಪಣೆಗೆ ಬಾರದ ಶ್ಲೋಕವನ್ನು ದೇವರು ಗೀತೆಯಲ್ಲಿ ಏಕೆ ಹೇಳಿದ್ದಾನೆ? ದೇವರು ಕ್ಷೇಮವನ್ನು ನೋಡುವವನಲ್ಲ ಎಂಬ ಮಾತೇ ನಿಜವೆಂದು ತೋಚುತ್ತಿದೆ ನೀನೇನು ಅನ್ನುತ್ತೀಯ ಎಂದು ಕೇಳಿದನು. ಅದಕ್ಕೆ ವಿಷ್ಣುಬ್ರಹ್ಮ "ಕ್ಷೇಮ ಕರ್ಮರೀತ್ಯ ನಡೆಯುತ್ತದೆನ್ನುವ ಸೂತ್ರದ ಪ್ರಕಾರ ದೇವರು ಯಾರ ಕ್ಷೇಮವನ್ನು ನೋಡುವವನಲ್ಲವೆಂದು ಅಂದುಕೊಳ್ಳುತ್ತಿದ್ದೆನು. ಆದ್ದರಿಂದ ಆ ಶ್ಲೋಕದ ಬಗ್ಗೆ ನಾನು ನಿನ್ನೊಂದಿಗೆ ವಿಭೇದಿಸುತ್ತಿದ್ದೆ ಅಷ್ಟೇ ವಿನಃ ಶ್ಲೋಕವನ್ನು ಕುರಿತು ಪೂರ್ತಿ ವಿವರ ನನಗೂ ಸಹ ತಿಳಿದಿಲ್ಲ. ಇದರ ವಿಷಯವನ್ನು ಪಕ್ಕದ ಊರಿನಲ್ಲಿರುವ ಗುರುಗಳ ಬಳಿಗೆ ಹೋಗಿ ವಿಚಾರಿಸಿ ವಿವರವಾಗಿ ತಿಳಿದು ಕೊಳ್ಳೋಣ" ಎಂದನು. ಇಬ್ಬರು ಸೇರಿ ಪಕ್ಕದ ಊರಿನಲ್ಲಿರುವ ಗುರುಗಳ ಬಳಿಗೆ ಹೋಗಿ ಆತನೊಂದಿಗೆ ಮಾತನಾಡುವುದಕ್ಕೆ ಕಾದುಕೊಂಡಿದ್ದರು. ಗುರುಗಳ ದರ್ಶನ ದೊರಕಿತು. ಗುರುಗಳ ಬಳಿ ಅವರ ಅನುಭವಗಳನ್ನು ಅಭಿಪ್ರಾಯಗಳನ್ನು ಹೇಳಿಕೊಂಡರು. "ಯೋಗಕ್ಷೇಮಮ್ ವಹಾಮ್ಯಹಮ್" ಅರ್ಥ ತಿಳಿಸೆಂದು ಕೋರಿದರು. ಆಗ ಆ ಗುರುಗಳು ಹೀಗೆ ಅಂದನು.

**ಗುರುವು :–** ಯೋಗಕ್ಷೇಮವೆಂದರೆ ನೀವೇನಂದುಕೊಂಡಿದ್ದೀರ?

**ರಾಮಬ್ರಹ್ಮ :–** ನಮ್ಮವೊಂದು ಯೋಗ, ನಮ್ಮವೊಂದು ಕ್ಷೇಮ ಎಂದು ಅಂದುಕೊಂಡಿದ್ದೇವೆ.

**ಗುರುವು :–** ನನ್ನನ್ನು ಯಾರೆಂದುಕೊಂಡು ನನ್ನ ಬಳಿಗೆ ಕೇಳಲು ಬಂದಿದ್ದೀರ?

**ವಿಷ್ಣುಬ್ರಹ್ಮ :–** ಗುರುವೆಂದು ನಂಬಿ ನಮ್ಮ ಸಂಶಯಗಳು ತೀರಿಸಿಕೊಳ್ಳಲು ಬಂದಿದ್ದೇವೆ.

**ಗುರುವು :-** ಎಲ್ಲರು ಅಂದುಕೊಂಡ ಹಾಗೆ ನನ್ನನ್ನು ನೀವು ಗುರು ಅಂದುಕೊಂಡರು ನಾನು ವಾಸ್ತವವಾಗಿ ಗುರು ಅಲ್ಲ.

ಬೋಧನೆಗಳು ಹೇಳುವವರೆಲ್ಲರನ್ನು ಸಹಜವಾಗಿ ಗುರುಗಳೆಂದು ಕೊಳ್ಳುವುದು ಪರಿಪಾಟಾಗಿದೆ. ಆದರೆ ಬೋಧನೆಗಳು ಹೇಳುವವರು ನೀವಂದುಕೊಂಡಂತೆ ಗುರುಗಳು ಅಲ್ಲ. ಬೋಧನೆಗಳು ಹೇಳುವವರು ಕೇವಲ ಬೋಧಕರೆ ಆಗುತ್ತಾರೆ. ಗುರು ಪ್ರಪಂಚವೆಲ್ಲದಕ್ಕು ಒಬ್ಬನೇ ಇರುತ್ತಾನೆ. ಆತನೇ ದೇವರು, ದೇವರು ಮಾತ್ರ ಗುರುವಾಗುವನು. ಉಳಿದವರೆಲ್ಲ ಗುರು ಹೇಳಿರುವದನ್ನೆ ಬೋಧಿಸುತ್ತಿರುತ್ತಾರೆ ಆದ್ದರಿಂದ ಅವರೆಲ್ಲರೂ ಬೋಧಕರೆ ಆಗುತ್ತಾರೆ. ಭೂಮಿ ಮೇಲೆ ಬೋಧಕರು ಗುರುಗಳಲ್ಲ, ಗುರುಗಳು ಬೋಧಕರಲ್ಲ. **ಈ ವಿಷಯದಲ್ಲಿ ಯಾವ ವಿಧವಾಗಿ ತಪ್ಪಾಗಿ ಬೋಧಕನನ್ನು ಗುರುವೆಂದು ಲೆಕ್ಕಹಾಕಿಕೊಳ್ಳುತ್ತಿದ್ದಾರೊ ಆ ವಿಧವಾಗಿಯೆ ಯೋಗ ಕ್ಷೇಮ ಎನ್ನುವ ವಿಷಯದಲ್ಲಿಯು ಸಹ ತಪ್ಪಾಗಿ ಅರ್ಥೈಸಿಕೊಂಡಿದ್ದಾರೆ.** ನನ್ನನ್ನು ನೀವು ಗುರು ಎಂದು ಅಂದುಕೊಂಡರೂ ನಾನೇಗೆ ಗುರುವಲ್ಲವೋ ಹಾಗೇ ನೀವಂದುಕೊಂಡಂತೆ ಯೋಗಕ್ಷೇಮವೆಂಬ ಮಾತಿನಲ್ಲಿ ನಿಮ್ಮ ಕ್ಷೇಮವೆಂದು ಇಲ್ಲ. ಅನ್ಯಚಿಂತೆ ಇಲ್ಲದಂತೆ ದೇವರನ್ನು ನಂಬಿದವನ ಯೋಗದವೊಂದು ಕ್ಷೇಮವನ್ನು ನೋಡುತ್ತೇನೆಂದು ದೇವರು ಹೇಳಿದ್ದಾನಾಗಲಿ ನಿನ್ನ ವೊಂದು ಕ್ಷೇಮವನ್ನು ನೋಡುತ್ತೇನೆಂದು ಹೇಳಲಿಲ್ಲ. ಯೋಗಕ್ಷೇಮ ಎಂದರೆ ಯೋಗವೊಂದರ ಕ್ಷೇಮವೆಂದು ನೀವಂದುಕೊಳ್ಳದೆ ಹೋಗಿರುವುದರಿಂದ ದೇವರ ಮಾತು ನಿಮಗೆ ಅಸತ್ಯವಾಗಿ ಕಾಣಿಸಿರಬಹುದು ಆದರೆ ದೇವರ ಮಾತು ಎಂದಿಗೂ ಅಸತ್ಯವಲ್ಲ. ಆದ್ದರಿಂದ ನಿನ್ನಲ್ಲಿ ಭಕ್ತಿಯಿದ್ದರೂ ನಿನ್ನ ಕ್ಷೇಮವನ್ನು ದೇವರು ನೋಡುವುದಿಲ್ಲ. ನಿನ್ನ ಕ್ಷೇಮವೆಲ್ಲ ನಿನ್ನ ಕರ್ಮವನ್ನು ಅನುಸರಿಸಿರುತ್ತದೆ. ನಿನ್ನ ಯೋಗದವೊಂದು ಕ್ಷೇಮವೆಲ್ಲವು ನಿನ್ನ ಭಕ್ತಿ ಶ್ರದ್ಧೆಗಳನ್ನು ಅನುಸರಿಸಿರುತ್ತದೆ. ಭಗವದ್ಗೀತೆಯಲ್ಲಿ ದೇವರು ಹೇಳಿದ ಶ್ಲೋಕದವೊಂದು ಅರ್ಥವನ್ನು ಇಲ್ಲಿಯವರೆಗು ಸರಿಯಾಗಿ ಯಾರೂ ಹೇಳಿಕೊಳ್ಳದಿರುವುದರಿಂದ ನೀವು ಸಹ ತಪ್ಪಾಗಿ ಅರ್ಥಮಾಡಿ ಕೊಂಡಿದ್ದೀರ. ಗುರುವು ಮೊದಲು ಹೇಳುವನು

ನಂತರ ಅದನ್ನು ಬೋಧಕರು ಹೇಳಬೇಕಾಗಿದೆ. ಗುರು ಭಗವದ್ಗೀತೆಯಲ್ಲಿ ಹೇಳಿದ ಶ್ಲೋಕಕ್ಕೆ ಬೋಧಕರು ಸರಿಯಾದ ವಿವರವನ್ನು ಒದಗಿಸಲಾಗದೆ ಹೋಗಿದ್ದಾರೆ. ಸರಿಯಾದ ಅರ್ಥಕೊಡದವನು ಬೋಧಕನಾಗಲಾರನು. ಭೂಮಿ ಮೇಲೆ ಎಷ್ಟೋ ಗುರುಗಳಂತೆ ಚಲಾವಣೆ ಆಗುತ್ತಿದ್ದರು ಅವರು ಯಾರೂ ಗುರುಗಳಲ್ಲ. ಅದರಲ್ಲಿ ಸ್ವಲ್ಪ ಜನ ಮಾತ್ರ ಬೋಧಕರು ಆಗಬಹುದು. ಉಳಿದವರೆಲ್ಲರೂ ಬೋಧಕರು ಸಹ ಅಲ್ಲ. ನನ್ನನ್ನು ನೀವು ಗುರು ಅಂದುಕೊಂಡರೂ ನಾನು ಕೇವಲ ಬೋಧಕನೆ, ಗುರುವು ಮಾತ್ರವಲ್ಲ.

**ವಿಷ್ಣುಬ್ರಹ್ಮ :–** ಗುರು ಬೋಧಕನು ಬೇರೆ ಬೇರೆ ಅಂದಂತೆ ಯೋಗ ಕ್ಷೇಮ ಬೇರೆ ಬೇರೆ ಅಲ್ಲವೆ?

**ಗುರುವು :–** ಯೋಗ ಬೇರೆ, ಕ್ಷೇಮ ಬೇರೆ. ಆದರೆ ಗೀತೆಯಲ್ಲಿ ಯೋಗ ಕ್ಷೇಮ ಎಂದು ಬೇರೆ ಬೇರೆಯಾಗಿ ಹೇಳಿಲ್ಲ. ಯೋಗಕ್ಷೇಮಮ್ ಎಂದಿದ್ದಾನೆ ಆದ್ದರಿಂದ ಯೋಗದ ಒಂದು ಕ್ಷೇಮ ಎಂದು ಅರ್ಥ ಮಾಡಿಕೊಳ್ಳಬೇಕು.

**ರಾಮಬ್ರಹ್ಮ :–** ಗುರುವನ್ನು ಬೋಧಕನನ್ನು ಹೇಗೆ ಗುರ್ತಿಸಬೇಕು?

**ಗುರುವು :–** ಗುರು ಸ್ವತಃವಾಗಿ ಹೇಳುವವನು, ಬೋಧಕನು ಹೇಳಿರುವುದನ್ನೇ ಬೋಧಿಸುವವನು. ಆದ್ದರಿಂದ ಸುಲಭವಾಗಿ ಗುರ್ತಿಸಬಹುದು.

**ವಿಷ್ಣುಬ್ರಹ್ಮ :–** ಯೋಗದ ಒಂದು ಕ್ಷೇಮವನ್ನು, ನನ್ನ ಒಂದು ಕ್ಷೇಮವನ್ನು ಹೇಗೆ ಗುರ್ತಿಸಬೇಕು.

**ಗುರುವು :–** ಯೋಗ ಭ್ರಷ್ಠನಾಗದಂತೆ ಯೋಗ ಅಭಿವೃದ್ಧಿ ಆಗುತ್ತಾ ಹೋಗುವುದನ್ನು ಯೋಗದ ಒಂದು ಕ್ಷೇಮವೆಂದು, ಜೀವಿಯಾದ ನಿನಗೆ ಕಷ್ಟಗಳು ಬಾರದಂತೆ ಸುಖದಿಂದ ಕಳೆಯುತ್ತಾ ಹೋದರೆ ನಿನ್ನವೊಂದು ಕ್ಷೇಮವೆಂದು ತಿಳಿಯಬೇಕು.

**ರಾಮಬ್ರಹ್ಮ :–** ಯೋಗ ಕ್ಷೇಮ ಏನನ್ನು ಅನುಸರಿಸಿ ಇರುತ್ತದೆ. ಹಾಗೇ ನನ್ನ ಕ್ಷೇಮ ಏನನ್ನು ಅನುಸರಿಸಿ ಇರುತ್ತದೆ?

**ಗುರುವು :–** ಮೊದಲೆ ಹೇಳಿದ್ದೇನಲ್ಲ ಶ್ರದ್ಧಾ ಭಕ್ತಿಗಳನ್ನು ಅನುಸರಿಸಿ ಯೋಗಕ್ಷೇಮ, ಕರ್ಮವನ್ನನುಸರಿಸಿ ನಿನ್ನ ಕ್ಷೇಮ ಇರುತ್ತದೆ.

**ವಿಷ್ಣು ಬ್ರಹ್ಮ :–** ಈಗಿನ ಗುರುಗಳಿಗೆ ನಾವು ಗುರುಗಳಲ್ಲ ಕೇವಲ ಬೋಧಕರೆಂದು ತಿಳಿದಿಲ್ಲವೆ?

**ಗುರುವು :–** ತಿಳಿದಿಲ್ಲ. ತಮ್ಮನ್ನು ಎಲ್ಲರೂ ಗುರುಗಳನ್ನುತ್ತಿದ್ದಾರೆ. ತಾವೂ ಗುರುಗಳೆಂದು ಅಂದುಕೊಳ್ಳುತ್ತಿದ್ದಾರೆ. ಯೋಗಕ್ಷೇಮವನ್ನು ಯೋಗ ಬೇರೆಯೆಂದು ಕ್ಷೇಮವು ಬೆರೆಯೆಂದು ಅಂದುಕೊಳ್ಳುವವರೆಗು ತಾವು ಕೇವಲ ಬೋಧಕರು ಸಹ ಅಲ್ಲವೆಂದು ತಿಳಿದಿಲ್ಲ.

**ರಾಮಬ್ರಹ್ಮ :–** ದೇವರ ವಾಕ್ಯವನ್ನು ವಕ್ರವಾಗಿ ಬೋಧಿಸುವುದರಿಂದ ಬರುವ ಫಲವೇನು?

**ಗುರುವು :–** ಕಾಣಿಸದ ಪಾಪಫಲ ಬಹಳ ಬರುತ್ತದೆ. ಎಲ್ಲರನ್ನು ವಕ್ರಮಾರ್ಗದಲ್ಲಿ ಕಳುಹಿಸಿದಂತವರಾಗುತ್ತಾರೆ ಆದ್ದರಿಂದ ಅದು ದೇವರಿಗೆ ವಿರುದ್ಧ ಮಾಡಿದಂತಾ ಗುತ್ತದೆ.

**ವಿಷ್ಣುಬ್ರಹ್ಮ :–** ನಾನು ಮೊದಲಿನಿಂದ ಯೋಗದ ವೊಂದು ಕ್ಷೇಮವೆಂದು, ನಮ್ಮ ಅಣ್ಣ ರಾಮಬ್ರಹ್ಮ ಯೋಗ ಕ್ಷೇಮ ಎರಡೆಂದು ಅಂದುಕೊಂಡಿದ್ದೆವು ಈಗ ನಿಮ್ಮ ಬೋಧನೆಯಿಂದ ನನ್ನದು ಸರಿಯಾದ ಭಾವವೆಂದು ತಿಳಿಯಿತು. ನಾನು ಮೊದಲಿನಿಂದ ಹಾಗೆ ಅಂದುಕೊಳ್ಳುವುದರಿಂದ ನನ್ನ ಶ್ರೀಶೈಲ ಯಾತ್ರೆಯಲ್ಲಿ ಬಸ್ಸು ಅಪಘಾತ ನಡೆದಿರುವುದಕ್ಕೆ ದೇವರಿಗೆ ಹರಕೆ ಕೋರಲಿಲ್ಲ. ಅದೆಲ್ಲವೂ ನನ್ನ ಕರ್ಮ ಅಂದುಕೊಂಡೆನು.

**ಗುರುವು :–** ವಾಸ್ತವವಾಗಿ ಅಪಘಾತಗಳಾಗಲಿ, ಕಷ್ಟಗಳಾಗಲಿ ಕರ್ಮದಿಂದಲೆ ಬರುವವು. ಯೋಗಕ್ಕೆ ಎಂತಹ ಹಾನಿ ಏರ್ಪಡದೆ ಹೋಗುವುದು ನಮ್ಮ ಭಕ್ತಿ ಶ್ರದ್ಧೆಗಳ ಮೇಲೆ ಆಧಾರಪಟ್ಟಿರುತ್ತದೆಂದು ಗೀತೆಯಲ್ಲಿ ಇದೇ ಸಾರಾಂಶ ಇದೆಯೆಂದು ತಿಳಿದು ನಡೆದುಕೊಳ್ಳುವವನು ಗೀತೆಯನ್ನು ಸರಿಯಾಗಿ ಅರ್ಥ ಮಾಡಿಕೊಂಡವನಾಗುತ್ತಾನೆ.

ಈ ವಿಧವಾಗಿ ಅವರ ಸಂಭಾಷಣೆಗಳು ಸಾಗಿದ ನಂತರ ಆ ಗುರುಗಳು ಗುರುವಲ್ಲವೆಂದು ಬೋಧಕನೆಂದು ತಿಳಿದವರಾಗಿ, ತಮ್ಮ ಯೋಗದ ವೊಂದು

ಕ್ಷೇಮವನ್ನು ಗುರುವಾದ ದೇವರೆ ನೋಡಬಲ್ಲವನೆಂದು, ತಮ್ಮವೊಂದು ಕ್ಷೇಮವು ತಮ್ಮ ಕರ್ಮ ಅಧೀನದಲ್ಲಿ ಇದೆಯೆಂದು ತಿಳಿದವರಾಗಿ ತಮ್ಮ ಮನೆಗೆ ಹೊರಟು ಹೋದರು.

# ವಿಚಿತ್ರ ಕುಟುಂಬ

ಮಾನವನಿಗೆ ಭಕ್ತಿ (ವಿಶ್ವಾಸ) ಎನ್ನುವುದು ಅವಶ್ಯಕವೆ. ಹಾಗೆಂದು ಆ ಭಕ್ತಿ ಮೂಢಭಕ್ತಿ ಆಗಬಾರದು. ಮಾನವನಿಗೆ ದೇವರ ವಿವರ ತಿಳಿದುಕೊಳ್ಳುವ ಜ್ಞಾನ ಅವಸರವೇ, ಹಾಗೆಂದು ಅದು ದೇವತೆಗಳ ಜ್ಞಾನ ಆಗಬಾರದು. ಮನುಷ್ಯನಿಗೆ ನಾಸ್ತಿಕವಾದ ಇರಬಹುದು, ಅದು ತನ್ನನ್ನು ಕುರಿತಾದ ವಾದವಾಗಿ ರಬೇಕು. ಆದರೆ ಅದು ದೇವರನ್ನು ಕುರಿತು ಪ್ರಾರಂಭವಾಗಬಾರದು.

ಪ್ರತಿ ಮನುಷ್ಯನಿಗೆ ಮದುವೆ ಅವಶ್ಯವೇ, ಆದರೆ ಆ ಮದುವೆಯಲ್ಲಿನ ಕಾರ್ಯಗಳಾದ ಅಕ್ಷತೆಗಳು, (ತಲಂಬರಗಳು) ಮೊದಲಾದವುಗಳಿಗೆ ಅರ್ಥ ತಿಳಿಯದಂತಾಗಬಾರದು. ಪ್ರತಿ ಮನುಷ್ಯ ತಾನಿರುವುದು ವಾಸ್ತವವೆ ಆದರೂ ತಾನು ಯಾರೊ ಎಲ್ಲಿದ್ದಾನೊ ವಿವರ ತಿಳಿಯದವನಾಗಬಾರದು. ಹಾಗೆ ಇದ್ದರೆ ಏನಾಗುತ್ತದೆನ್ನುವುದಕ್ಕೆ ಒಂದು ಕಥೆಯನ್ನು ಉದಾಹರಣೆಯಾಗಿ ತೆಗೆದು ಕೊಳ್ಳೋಣ.

ಒಂದು ಊರಿನಲ್ಲಿ ಐದುಜನ ಅಣ್ಣತಮ್ಮಂದಿರಿರುವ ಕುಟುಂಬವಿತ್ತು. ಅವರ ತಂದೆ ಪೂರ್ತಿ ನಾಸ್ತಿಕನು. ದೇವರು ಎಂಬ ಮಾತು ಆತನಿಗೆ ಸರಿಹೋಗುತ್ತಿರಲಿಲ್ಲ. ಆದ್ದರಿಂದ ತನಗೆ ಹುಟ್ಟಿದ ಐದು ಜನ ಗಂಡು ಮಕ್ಕಳಿಗೆ ದೇವತೆಗಳ ಹೆಸರುಗಳನ್ನು ಇಡದೆ ವಸ್ತುಗಳ ಹೆಸರುಗಳನ್ನು ಇಟ್ಟಿದ್ದಾನೆ. ಒಂದನೆ ಮಗನ ಹೆಸರು ಸಕ್ಕರೆ, ಎರಡನೆ ಮಗನ ಹೆಸರು ಹಾಲು, ಮೂರನೆಯವನ ಹೆಸರು ಉಪ್ಪು (ಲವಣ), ನಾಲ್ಕನೆಯವನ ಹೆಸರು ಬೆಣ್ಣೆ, ಐದನೆಯವನ ಹೆಸರು ಸೊನ್ನೆ ಎಂದು ನಾಮಕರಣ ಮಾಡಿದನು. ತಂದೆ

ಹೆಸರೇನೋ ಆದಿ ನಾರಾಯಣ ಕೃಷ್ಣಪ್ರಸಾದ್ ಎಂದು ಅವರ ಹಿರಿಯರು ಇಟ್ಟಿದ್ದರು. ಆದರೆ ಆ ಹೆಸರು ದೇವತೆಗಳದು ಆಗಿರುವುದರಿಂದ ತನಗೆ ಇಷ್ಟವಾಗಲಿಲ್ಲ. ಸಹಿ ಮಾಡುವಾಗ ಆ ಹೆಸರನ್ನು ಮಾತ್ರ ಬಳಸಿಕೊಂಡು ಉಳಿದ ಸಮಯಗಳಲ್ಲಿ ಆಚಾರಿ ಎಂದು ಕರೆಸಿಕೊಳ್ಳುತ್ತಿದ್ದನು. ಆಚಾರಿ ಎನ್ನುವುದು ಅವರ ಕುಲದ ಹೆಸರು.

ಐದು ಜನ ಗಂಡುಮಕ್ಕಳಲ್ಲಿ ದೊಡ್ಡವನು ಮೊದಲನೆಯವನು ಆದ ಸಕ್ಕರೆ ಎನ್ನುವವನು ಸಾತ್ವಿಕನು, ಎರಡನೆಯವನಾದ ಹಾಲು ರಾಜಸನು, ಮೂರನೆಯವನಾದ ಲವಣ ತಾಮಸನು, ನಾಲ್ಕನೆಯವನಾದ ಬೆಣ್ಣೆ ಹೇತುವಾದಿ, ಐದನೆಯವನಾದ ಸೊನ್ನೆ ನಾಸ್ತಿಕನು. ಐದು ಜನ ಮಕ್ಕಳು ಐದು ಮಾರ್ಗಗಳಲ್ಲಿ ಇರುವವರೆ ಅಲ್ಲದೆ, ಐದನೆಯವನಾದ ಸೊನ್ನೆಗೆ ತಂದೆ ಸಹ ಜೊತೆಗೆ ಇದ್ದೂ ಇಬ್ಬರೂ ನಾಸ್ತಿಕವಾದವನ್ನು ಬಲಪಡಿಸುತ್ತಿದ್ದರು. ಇವರದು ಮಧ್ಯ ತರಗತಿ ಕುಟುಂಬವಾದ್ದರಿಂದ ದೊಡ್ಡದಾಗಿ ಆರ್ಥಿಕ ವ್ಯವಸ್ಥೆ ಇಲ್ಲದವರಾಗಿದ್ದರು. ದೊಡ್ಡವರಾದ ಮೂವರು ಗಂಡು ಮಕ್ಕಳು ಕೋನ ಅಪ್ಪಯ್ಯ ಸ್ವಾಮಿಗೆ ನಿನ್ನ ಬೆಟ್ಟಕ್ಕೆ ಬರುತ್ತೇವೆಂದು ಹರಕೆ ಹೊತ್ತುಕೊಂಡರು. ಅವರ ಭಕ್ತಿ ತಂದೆಗಾಗಲಿ ಚಿಕ್ಕಮಗನಾದ ಸೊನ್ನೆಗಾಗಲಿ ಪೂರ್ತಿ ಇಷ್ಟವಾಗುತ್ತಿರಲಿಲ್ಲ. ಏಕೆಂದರೆ ಅವರು ನಾಸ್ತಿಕರು, ಆದ್ದರಿಂದ ದೇವರೆ ಇಲ್ಲವೆನ್ನುತ್ತಿದ್ದರೆ ನೀವು ಅಪ್ಪಯ್ಯ ಸ್ವಾಮಿ ಎಂದು ಮೂವರು ಹೊರಟಿದ್ದಾರೆಂದು ಅವರಿಗೆ ಮೂವರ ಮೇಲೆ ಕೋಪವಿರುತ್ತಿತ್ತು. ಆದರೂ ಅವರ ಮಾತನ್ನು ಮೂವರು ತಲೆ ಕೆಡಸಿಕೊಳ್ಳುತ್ತಿರ ಲಿಲ್ಲ. ನಾಲ್ಕನೆ ಮಗನಾದ ಹೇತುವಾದಿ ಬೆಣ್ಣೆ ಮಾತ್ರ ಆ ಮೂವರ ಭಕ್ತಿಯನ್ನು ಕುರಿತು ಪ್ರಶ್ನೆ ಮೇಲೆ ಪ್ರಶ್ನೆ ಹಾಕಿ ವಿಮರ್ಶಿಸುತ್ತಿದ್ದನು. ಪ್ರಶ್ನಿಸುವುದೇ ತನ್ನ ಮಾತಾಗಿ ಇಟ್ಟುಕೊಂಡಿದ್ದನು. ಯಾವನಾದರೂ ಉತ್ತರ ಹೇಳುವುದಕ್ಕೆ ಮುಂದಕ್ಕೆ ಬಂದರೆ ಅವನ ಉತ್ತರವನ್ನು ಕೇಳುವವನಲ್ಲ. ಯಾರು ಹೇಳಿದರು ಯಾವ ಉತ್ತರ ಹೇಳಿದರು ಅದು ಸರಿಯಲ್ಲವೆಂದು ಒಡೆದುಹಾಕುತ್ತಿದ್ದನು. ತನಗೆ ತಿಳಿದಷ್ಟು ಯಾರಿಗೂ ತಿಳಿಯದೆನ್ನುವ ಉದ್ದೇಶವನ್ನು ತನ್ನಲ್ಲಿ ಬೆಳೆಸಿಕೊಂಡು

ಯಾವ ಮಾತನ್ನು ಕೇಳುವವನಲ್ಲ. ತನ್ನ ಪ್ರಶ್ನೆಗೆ ಉತ್ತರ ಹೇಳುವವರಿದ್ದರೂ ಎದುರಿಗಿರುವವನಿಗೆ ಏನು ತಿಳಿಯದೆನ್ನುವ ಭಾವದಿಂದ ಆ ಉತ್ತರವನ್ನು ಪೂರ್ತಿಯಾಗಿ ಕೇಳುತ್ತಿರಲಿಲ್ಲ. ತಾನೇ ದೊಡ್ಡ ಸತ್ಯಾನ್ವೇಷಿಯೆಂದು ಹೆಮ್ಮೆ ಪಡುತ್ತಿದ್ದನು. ಆ ಮನೆಯಲ್ಲಿ ನಾಸ್ತಿಕವಾದಿಗಳಾದ ತಂದೆ ಚಿಕ್ಕ ಕುಮಾರ ಇಬ್ಬರೂ ದೇವರೇ ಇಲ್ಲ, ಗುಡಿ ಗೋಪುರಗಳೆಲ್ಲ ಭ್ರಮೆ, ಕೆಲವರು ಸ್ವಾರ್ಥಪರರು ದೇವರು ಎಂಬ ಪದವನ್ನು ಹುಟ್ಟಿಸಿ ಪ್ರಚಾರ ಮಾಡುತ್ತಿದ್ದಾರೆಂದು ದೇವರನ್ನು ಯಾರಾದರೂ ನೋಡಿದ್ದೀರ? ನೋಡಿದ್ದರೆ ನಮಗೂ ತೋರಿಸಿರೆಂದು ಅನ್ನುತ್ತಿದ್ದರು. ಇನ್ನು ದೊಡ್ಡವರಾದ ಮೂವರು ಅಣ್ಣತಮ್ಮಂದಿರು ದೇವತೆಗಳ ಭಕ್ತಿಯಲ್ಲಿದ್ದು ಒಂದೊಂದು ಕಾಲದಲ್ಲಿ ಒಂದೊಂದು ದೇವರಿಗೆ ಕೈಮುಗಿದು ಕೊಳ್ಳುತ್ತ ಹಣ ಖರ್ಚುಮಾಡಿ ಪೂಜೆಗಳನ್ನು ಮಾಡುತ್ತಿದ್ದರು. ಆ ಮೂವರಲ್ಲಿಯೂ ಸಹ ಭಕ್ತಿಯಲ್ಲಿ ಸ್ವಲ್ಪ ಭೇದಾಭಿಪ್ರಾಯಗಳು ಇರುತ್ತಿದ್ದವು.

ಸಕ್ಕರೆ ಹಾಲು ಉಪ್ಪು ಎನ್ನುವ ಮೂವರು ಅಣ್ಣತಮ್ಮಂದಿರು ಕೋನ ಅಪ್ಪಯ್ಯಸ್ವಾಮಿಗೆ ಕೈಮುಗಿದುಕೊಂಡರು. ಅವರು ಮುಗಿದುಕೊಂಡಿರುವುದರ ಪ್ರಕಾರ ಅಪ್ಪಯ್ಯಸ್ವಾಮಿಗೆ ಜನವರಿ ಒಂದನೇ ತಾರೀಖಿಗೆ ಹೋಗಬೇಕಾಗಿದೆ. ಕೋನ ಅಪ್ಪಯ್ಯಸ್ವಾಮಿ ದೇವಾಲಯ ಸುಮಾರು ಸಾವಿರ ಮೈಲುಗಳ ದೂರದಲ್ಲಿದೆ. ಮೂರನೆಯವನಾದ ಉಪ್ಪು ಆ ಸಾವಿರ ಮೈಲುಗಳ ದೂರ ಕಾಲ್ನಡಿಗೆಯಲ್ಲಿ ಹೋಗಬೇಕೆಂದುಕೊಂಡನು. ಎರಡನೆಯವನಾದ ಹಾಲು ಅಪ್ಪಯ್ಯಸ್ವಾಮಿ ಬೆಟ್ಟದವರೆಗು ಬಸ್ಸು ಪ್ರಯಾಣ ಮಾಡಿ ಬೆಟ್ಟವನ್ನು ಮಾತ್ರ ಕಾಲ್ನಡಿಗೆಯಲ್ಲಿ ಅತ್ತಿ ಹೋಗಬೇಕೆಂದುಕೊಂಡನು. ದೊಡ್ಡವನಾದ ಸಕ್ಕರೆ ಅಪ್ಪಯ್ಯಸ್ವಾಮಿ ಬೆಟ್ಟದವರೆಗು ರೈಲಿನಲ್ಲಿ ಪ್ರಯಾಣಮಾಡಿ ಅಲ್ಲಿಂದ ಬಸ್ಸಿನಲ್ಲಿ ಬೆಟ್ಟದ ಮೇಲೆ ಹೋಗಿ ದರ್ಶನ ಮಾಡಿಕೊಂಡು ಹರಕೆಯನ್ನು ಸಲ್ಲಿಸಬೇಕೆಂದು ಕೊಂಡನು. ಈ ವಿಧವಾಗಿ ಮೂವರು ಮೂರು ವಿಧಗಳಲ್ಲಿ ಬೆಟ್ಟಕ್ಕೆ ಪ್ರಯಾಣವಾದರು. ಮೂರನೆಯವನು ಉಪ್ಪು ಕಾಲ್ನಡಿಗೆಯಲ್ಲಿ ಪ್ರಯಾಣ ಮಾಡುತ್ತಾ ಸಾಗಿಹೋಗುವುದಕ್ಕೆ ತಿಂಗಳ ಮೊದಲೆ ಡಿಸೆಂಬರು ಮೊದಲ

ದಿನವೇ ಹೊರಟನು. ಹಾಗೆ ನಾಲ್ಕು ನೂರು ಮೈಲುಗಳು ನಡೆಯುವ ಹೊತ್ತಿಗೆ ಕಾಲುಗಳು ಬಾವು ಬಂದು ನಡೆಯುವುದಕ್ಕೆ ಕಷ್ಟವಾಯಿತು. ಕಷ್ಟವಾದರೂ ಹಾಗೇ ನಡೆಯುತ್ತ ತನ್ನ ಪ್ರಯಾಣವನ್ನು ಸಾಗಿಸಿದನು. ಎರಡನೆಯವನಾದ ಹಾಲು ಬೆಟ್ಟದವರೆಗು ರೈಲಿನಲ್ಲಿ ಹೋಗಿ ಹತ್ತು ಮೈಲು ಬೆಟ್ಟ ಹತ್ತುವುದಕ್ಕೆ ಬಹಳ ಪ್ರಯಾಸಪಟ್ಟನು. ದೊಡ್ಡವನಾದ ಸಕ್ಕರೆ ಬೆಟ್ಟದ ಮೇಲಕ್ಕೂ ಸಹ ಬಸ್ಸು ಪ್ರಯಾಣಮಾಡಿ ಯಾವ ಕಷ್ಟವಿಲ್ಲದಂತೆ ಬೆಟ್ಟದ ಮೇಲಕ್ಕೆ ಸೇರಿಕೊಂಡನು. ಜನವರಿ ಮೊದಲನೆ ತಾರೀಖಿಗೆ ಮೂವರು ಅಪ್ಪಯ್ಯಸ್ವಾಮಿ ಬೆಟ್ಟಕ್ಕೆ ಸೇರಿಕೊಂಡರು. ತಿರುಗು ಪ್ರಯಾಣದಲ್ಲಿ ಎಲ್ಲರೂ ಸೇರಿ ಬಂದರು.

ದೊಡ್ಡವರು ಮೂವರು ಮನೆಗೆ ಬರುತ್ತಲೆ ನಾಲ್ಕನೆಯವನಾದ ಬೆಣ್ಣೆ ಅವರೊಂದಿಗೆ ವಾದಕ್ಕಿಳಿದನು. ದೇವರೆಂಬುವನು ಇಲ್ಲವೇ ಇಲ್ಲ. ಮನುಷ್ಯರು ಮಾಡಿಕೊಂಡ ಮೂಢಕಲ್ಪನಯೇ ದೇವರು. ಮೂಢ ವಿಶ್ವಾಸಗಳಿಗೆ ಮೂಲವಾದ ದೇವರಿದ್ದಾನೆಂದು ಹಣ ಖರ್ಚುಮಾಡಿ ನೀವು ಹೋಗಿಬರುವುದು ಒಳ್ಳೆಯದಲ್ಲ ಎಂದನು. ನಾಲ್ಕನೆಯವನಾದ ಬೆಣ್ಣೆ ವಾದದೊಂದಿಗೆ ಐದನೆಯವನಾದ ಸೊನ್ನೆ ಸಹ ಸೇರಿಕೊಂಡನು. ಅಷ್ಟರಲ್ಲಿ ಅವರ ತಂದೆಯು ಸಹ ಅವರ ವಾದದೊಂದಿಗೆ ಏಕೀಭವಿಸಿದನು. ಇದರೊಂದಿಗೆ ಮೂವರು ದೇವರಿದ್ದಾನೆಂದು, ಮೂವರು ದೇವರಿಲ್ಲವೆಂದು ವಾದಿಸತೊಡಗಿದರು. ಅವರ ವಾದ ಹೆಚ್ಚಾಗಿ ಪಕ್ಕದ ಮನೆಯವರೆಗು ಹರಡಿತು. ಪಕ್ಕದ ಮನೆ ಯಜಮಾನ ಅವರ ವಾದವನ್ನು ನಿಲ್ಲಿಸಬೇಕೆಂದು ನೋಡಿದನು. ಆದರೂ ಅವರು ನಿಲ್ಲಲಿಲ್ಲ. ದೇವರಿದ್ದಾನೆಂದು ನಿರೂಪಿಸಬಲ್ಲಿರಾ ಎಂದು ಮೂವರು, ಇಲ್ಲವೆಂದು ನಿರೂಪಿಸಬಲ್ಲಿರಾ ಎಂದು ಮೂವರು ವಾದಿಸತೊಡಗಿದರು. ಇವರ ವಾದಕ್ಕೆ ಮಧ್ಯವರ್ತಿಯಾಗಿ ಪಕ್ಕದ ಮನೆ ಯಜಮಾನನಾದ ಜಲಂಧರನನ್ನು ಇಟ್ಟುಕೊಂಡರು. ಜಲಂಧರನು ಸಾಮಾನ್ಯನಲ್ಲ ಅವರಿಗೆ ಸರಿಯಾದ ಮಧ್ಯವರ್ತಿಯೆ ದೊರಕಿದನು. ಜಲಂಧರನು ಅವರ ವಾದ ತೀರಿಸುವುದಕ್ಕೆ ಅವರೊಂದಿಗೆ ಒಂದು ನಿಬಂಧನೆ ಏರ್ಪಡಿಸಿ ಕೊಂಡನು. ತನ್ನ ಪ್ರಶ್ನೆಗಳಿಗೆ ಎರಡು ಕಡೆಯವರು ಸಮಾಧಾನ ಹೇಳಬೇಕು.

ಯಾರ ಸಮಾಧಾನಗಳು ಸಮಂಜಸವಾಗಿ ಶಾಸ್ತ್ರಬದ್ಧವಾಗಿ ಇರುವವೊ ಅವರ ವಾದವನ್ನೆ ಒಪ್ಪಿಕೊಳ್ಳಲಾಗುತ್ತದೆ. ಸಮಾಧಾನ ಸರಿಯಿಲ್ಲದವರ ವಾದವನ್ನು ಒಡೆದು ಹಾಕಲಾಗುತ್ತದೆ ಎಂದು ನಿಬಂಧನೆಯನ್ನು ಏರ್ಪಡಿಸಿದನು. ಅದಕ್ಕೆ ಇಬ್ಬರ ಕಡೆಯವರು ಒಪ್ಪಿಕೊಂಡರು. ನಮ್ಮ ಸಮಾಧಾನಗಳೆಲ್ಲವೂ ಸಮಂಜಸ ವಾಗಿಯೆ ಇರುವವೆಂದು ಆಸ್ತಿಕ ತ್ರಯ ಅಂದುಕೊಂಡರು. ನಮ್ಮ ಸಮಾಧಾನವು ಶಾಸ್ತ್ರಬದ್ಧವಾಗಿರುವವೆಂದು ನಾವೇ ಗೆಲ್ಲಬಲ್ಲೆವೆಂದು ನಾಸ್ತಿಕತ್ರಯ ಅಂದು ಕೊಂಡರು. ಮೊದಲು ಆಸ್ತಿಕರಾದ ಸಕ್ಕರೆ ಹಾಲು ಉಪ್ಪು ಅವರನ್ನು ಜಲಂಧರನು ಪ್ರಶ್ನಿಸಲು ಪ್ರಾರಂಭಿಸಿದನು.

**ಜಲಂಧರ್ :–** ದೈವ ಭಕ್ತಿಯಲ್ಲಿ ನೀವು ಮೂವರು ಒಂದೇ ವಿಧವಾಗಿ ಇದ್ದೀರಾ?

**ಸಕ್ಕರೆ :–** ಇದ್ದೇವೆ.

**ಜಲಂಧರ್ :–** ಮನೆ ಪಕ್ಕದಲ್ಲೆ ಇದ್ದೇನಾದ್ದರಿಂದ ನನಗೆ ಎಲ್ಲ ತಿಳಿದಿದೆ, ಒಂದೇ ವಿಧವಾಗಿ ಇದ್ದರೆ ಕೋನ ಅಪ್ಪಯ್ಯಸ್ವಾಮಿಗೆ ಒಬ್ಬರು ಕಾಲ್ನಡಿಗೆಯಲ್ಲಿ ಮತ್ತೊಬ್ಬರು ರೈಲು ಪ್ರಯಾಣ ಮಾಡಿದ್ದೀರಲ್ಲ ಇದಕ್ಕೆ ಏನನ್ನುತ್ತೀರಿ.

**ಉಪ್ಪು :–** ಅವರಿಗಿಂತ ನನಗೆ ಭಕ್ತಿ ಹೆಚ್ಚಾಗಿದೆ ಆದ್ದರಿಂದ ನಾನು ಕಾಲ್ನಡಿಗೆಯಲ್ಲಿ ಹೋಗಿದ್ದೇನೆ. ಅವರಿಗಿಂತ ನಾನು ಸ್ವಲ್ಪ ಮೇಲು.

**ಸಕ್ಕರೆ :–** ಅವನು ಕಾಲ್ನಡಿಗೆಯಲ್ಲಿ ಹೋದರೂ ಕಾಣಿಕೆ ಕೊಟ್ಟಿರುವುದು ನೂರು ರೂಪಾಯಿಗಳೆ. ನಾನು ಸಾವಿರ ರೂಪಾಯಿಗಳನ್ನು ಕಾಣಿಕೆಯಾಗಿ ದೇವರಿಗೆ ಕೊಟ್ಟಿದ್ದೇನೆ. ಎರಡನೆ ತಮ್ಮನಾದ ಹಾಲು ಐದುನೂರು ಮಾತ್ರ ಕಾಣಿಕೆಯಾಗಿ ಹುಂಡಿಯಲ್ಲಿ ಹಾಕಿದ್ದಾನೆ. ಲೆಕ್ಕ ಪ್ರಕಾರ ನಾನು ಹೆಚ್ಚಿಗೆ ಹಾಕಿ ದೇವರಿಗೆ ಹತ್ತಿರದವನಂತೆ ಇದ್ದೇನೆ.

**ಹಾಲು :–** ನಾನು ಕಾಣಿಕೆ ಹಾಕಿರುವುದು ಐದು ನೂರೆ ಆದರೂ ಕೋರಿಕೆ ಏನೂ ಕೋರಲಿಲ್ಲ. ಸಾವಿರ ಹಾಕಿದ ಸಕ್ಕರೆ ವ್ಯಾಪಾರದಲ್ಲಿ ಲಕ್ಷ ಲಾಭ ಬರಬೇಕೆಂದು ಕೋರಿಕೊಂಡನು. ನೂರು ಹಾಕಿದ ಉಪ್ಪು ಸಹ ತನಗೆ ಲಾಭ ಲಕ್ಷಗಳಲ್ಲಿದ್ದರೆ ಬರುತ್ತೇನೆಂದು ಹರಕೆಹೊತ್ತು ದೇವರಿಗೆ ಬಾರವನ್ನು ಜವಾಬ್ದಾರಿ

ಯನ್ನು ಇಟ್ಟಿದ್ದಾರೆ. ನಾನು ಏನು ಕೋರಲಿಲ್ಲ, ಯಾವ ಬಾರವನ್ನು ಇಡಲಿಲ್ಲ ಆದ್ದರಿಂದ ನಾನೇ ಮೇಲು ಅಲ್ಲವೆ! ದೇವರಿಗೆ ಕೆಲಸವಿಟ್ಟ ಅವರಿಬ್ಬರಿಗಿಂತ ಏನೂ ಕೇಳದ ನಾನೇ ಮೇಲು ಅಂದನು.

ಹೀಗೆ ದೇವರ ಮೇಲೆ ನಂಬಿಕೆಯಿದ್ದು ಆಸ್ತಿಕರೆಂದೆನಿಸಿಕೊಂಡ ಸಕ್ಕರೆ, ಹಾಲು, ಉಪ್ಪು ಮೂವರ ವಾದಗಳನ್ನು ಕೇಳಿದ ಜಲಂಧರನು ಅವರನ್ನೇ ಪ್ರಶ್ನಿಸಿದನು.

**ಜಲಂಧರ್ :–** ದೇಶದಲ್ಲಿ ಎಷ್ಟೋ ಮಂದಿ ದೇವತೆಗಳಿರುವಾಗ ಕೋನ ಅಪ್ಪಯ್ಯಸ್ವಾಮಿಗೆ ಏಕೆ ಹರಕೆ ಹೊತ್ತುಕೊಂಡಿದ್ದೀರ?

**ಸಕ್ಕರೆ :–** ಎಲ್ಲರ ದೇವತೆಗಳಿಗಿಂತ ಬೇಗ ಬೇಡಿಕೊಂಡ ಬೇಡಿಕೆಗಳನ್ನು ತೀರಿಸುತ್ತಾನೆಂದು ಹರಕೆ ಹೊತ್ತುಕೊಂಡಿದ್ದೇವೆ.

**ಜಲಂಧರ್ :–** ಹಾಲನ್ನು ಕೇಳುತ್ತಿದ್ದೇನೆ. ನಿನಗೆ ಯಾವ ಕೋರಿಕೆ ಇಲ್ಲವಲ್ಲ ನೀನೇಕೆ ಆ ದೇವರನ್ನು ಕೈ ಮುಗಿದಿದ್ದೀಯ?

**ಹಾಲು :–** ಮುಗಿಯದಿದ್ದರೂ ಆತನೇ ನನ್ನ ಒಳ್ಳೆದು ಕೆಟ್ಟದು, ನನ್ನ ಕ್ಷೇಮಗಳು, ನನ್ನ ರೋಗಗಳು ನೋಡಿಕೊಳ್ಳುತ್ತಾನೆಂದು ಹರಕೆ ಹೊತ್ತಿದ್ದೇನೆ.

**ಜಲಂಧರ್ :–** ಅವರು ಕೇಳಿ ಕೆಲಸ ಮಾಡಿಸಿಕೊಳ್ಳುವುದಕ್ಕೆ ಹರಕೆ ಹೊತ್ತಿದ್ದಾರೆ, ನೀನು ಕೇಳದೆ ಕೆಲಸ ಮಾಡಿಸಿಕೊಳ್ಳುವುದಕ್ಕೆ ಹರಕೆ ಹೊತ್ತಿದ್ದೀಯ. ಹೇಗಾದರೇನು ನಿನಗೂ ಸಹ ಒಳಗೆ ಕೋರಿಕೆ ಇದ್ದಂತೆ ಅಲ್ಲವೆ!

**ಹಾಲು :–** ನಾನು ಅವರಹಾಗೆ ಇಷ್ಟು ಅಷ್ಟು ಎಂದು ಮುಗಿಯಲಿಲ್ಲವಲ್ಲ!

**ಜಲಂಧರ್ :–** ಒಂದು ಲೆಕ್ಕದಲ್ಲಿ ಅವರ ಕೋರಿಕೆಗೆ ಲಕ್ಷ ಎಂದೊ, ಹತ್ತು ಲಕ್ಷಗಳೆಂದೋ ಪರಿಮಿತಿಯಿದೆ. ನಿನ್ನದು ಪರಿಮಿತಿಯಿಲ್ಲದ ಕೋರಿಕೆಯಂತೆ ಕಾಣಿಸುತ್ತಿದೆ. ಹೇಗಾದರೇನು ಎಲ್ಲರಿಗಿಂತ ಒಳ್ಳೆಯವನೆಂದೂ, ಕೋರಿಕೆಗಳು ತೀರಿಸುವವನೆಂದೂ ಲೆಕ್ಕಹಾಕಿ ಅಪ್ಪಯ್ಯ ಸ್ವಾಮಿಯನ್ನೇ ಆರಿಸಿಕೊಂಡಿದ್ದೀರ. ಅಪ್ಪಯ್ಯಸ್ವಾಮಿಗೆ ತಾಯಿತಂದೆಯರಿದ್ದಾರಾ? ಅವರು ಯಾರು? ಅವರು ಅಪ್ಪಯ್ಯಸ್ವಾಮಿಗಿಂತ ಮುಖ್ಯರಲ್ಲವೆ?

**ಸಕ್ಕರೆ :–** ಆತನ ಹುಟ್ಟಿನಲ್ಲಿಯೆ ಎಷ್ಟೋ ದೊಡ್ಡತನವಿದೆ, ಆತನು ಎಲ್ಲರ ಹಾಗೆ ಸಾಮಾನ್ಯವಾಗಿ ಹುಟ್ಟಲಿಲ್ಲ.

**ಹಾಲು :–** ತಾಯಿ ತಂದೆ ಇಬ್ಬರು ಹೆಂಗಸರೆ. ಒಬ್ಬರನ್ನೊಬ್ಬರು ವಿವಾಹವಾಗಿ ದಂಪತಿಗಳಾಗಿದ್ದಾರೆ. ಅವರಿಬ್ಬರು ದೊಡ್ಡ ತಪಸ್ಸು ಮಾಡಿ ತಮಗೆ ದೊಡ್ಡ ಸಂತಾನ ಆಗಬೇಕೆಂದು ಶ್ರೀ ಮಹಾವಿಷ್ಣುವನ್ನು ಬೇಡಿಕೊಂಡಿದ್ದರು. ಶ್ರೀ ಮಹಾ ವಿಷ್ಣುವಿನ ವರ ಪ್ರಸಾದದಿಂದ ಹುಟ್ಟಿದವನು ಅಪ್ಪಯ್ಯಸ್ವಾಮಿ.

**ಜಲಂಧರ್ :–** ಇದೆಂತಹ ವಿಚಿತ್ರ ಇಬ್ಬರು ಹೆಂಗಸರಿಗೆ ಸಂತಾನವೆ! ಎಷ್ಟು ವಿಷ್ಣುವಿನ ವರವಾದರೇನು ಪುರುಷನಿಲ್ಲದೆ ಹೆಂಗಸರಿಗೆ ಸಂತತಿ ಆಗುತ್ತಾ? ನಂಬಬಹುದಾ?

**ಹಾಲು :–** ಇಬ್ಬರು ಹೆಂಗಸರಾಗಿರುವುದರಿಂದ ಶ್ರೀ ವಿಷ್ಣುವೇ ಇವರಿಗೆ ಸಂತಾನ ಆಗುವುದಕ್ಕೆ ಒಂದು ತಿಂಗಳು ಒಬ್ಬರು ಗಂಡಸರಂತೆ, ಒಬ್ಬರು ಹೆಂಗಸರಂತೆ ಇರಬೇಕೆಂದು ವರ ಕೊಟ್ಟಿದ್ದಾನೆ. ಅದರ ಪ್ರಕಾರ ಇಬ್ಬರು ಸ್ತ್ರೀಯರಲ್ಲಿ ತಿಂಗಳಿಗೊಬ್ಬರು ಪುರುಷನಂತೆ ಬದಲಾವಣೆಯಾಗುತ್ತಾರೆ. ಆದ್ದರಿಂದ ಅವರಿಗೆ ಸಂತತಿಯಾಗಿ ಅಪ್ಪಯ್ಯಸ್ವಾಮಿ ಹುಟ್ಟಿದ್ದಾನೆ.

**ಜಲಂಧರ್ :–** ಅಪ್ಪಯ್ಯಸ್ವಾಮಿಗೆ ಆ ಇಬ್ಬರ ಹೆಂಗಸರಲ್ಲಿ ತಾಯಿ ಯಾರು? ತಂದೆ ಯಾರು?

**ಉಪ್ಪು :–** ಹೇಗೆ ಹೇಳಲಾಗುತ್ತದೆ. ತಾಯಿ ಇಂತವಳೆ ಎಂದು, ತಂದೆ ಇಂತವನೆ ಎಂದು ಹೇಳುವುದಕ್ಕೆ ಅವಕಾಶವಿಲ್ಲ. ತಿಂಗಳಿಗೊಬ್ಬರು ತಂದೆ ತಿಂಗಳಿಗೊಬ್ಬರು ತಾಯಿಯಲ್ಲವೆ!

**ಜಲಂಧರ್ :–** ಆ ಇಬ್ಬರ ಹೆಂಗಸರ ಹೆಸರುಗಳಲ್ಲಾದರೂ ವ್ಯತ್ಯಾಸವಿದೆಯಾ? ಅವರ ಹೆಸರುಗಳೇನು?

**ಸಕ್ಕರೆ :–** ಇಂದ್ರಮತಿ, ಚಂದ್ರಮತಿ. ಒಂದು ತಿಂಗಳಲ್ಲಿ ಇಂದ್ರಮತಿ ಇಂದ್ರನೆಂಬ ಹೆಸರಿನಿಂದ ಪುರುಷನಾಗಿ ಚಲಾವಣೆಯಾದರೆ, ಮತ್ತೊಂದು ತಿಂಗಳಲ್ಲಿ ಚಂದ್ರಮತಿ ಚಂದ್ರನೆಂಬ ಹೆಸರಿನಲ್ಲಿ ಪುರುಷನಾಗಿ ಚಲಾವಣೆ ಆಗುತ್ತಿದ್ದಾರೆ.

**ಜಲಂಧರ್ :–** ಇಂತವನೆ ತಂದೆ ಎಂದು, ಇವಳೆ ತಾಯಿ ಎಂದು ತಿಳಿಯದ ಅಪ್ಪಯ್ಯಸ್ವಾಮಿ ನಿಮಗೆ ದೊಡ್ಡ ದೇವರಾದಾಗ, ಆತನು ಹುಟ್ಟುವುದಕ್ಕೆ ವರಕೊಟ್ಟ ವಿಷ್ಣುವು ಅಪ್ಪಯ್ಯಸ್ವಾಮಿಗಿಂತ ದೊಡ್ಡವನಲ್ಲವೆ?

**ಸಕ್ಕರೆ :–** ವಿಷ್ಣುವನ್ನು ಪೂಜಿಸುವವರು ಸಹ ಕೆಲವರಿದ್ದಾರೆ. ಹಾಗೆಂದುಕೊಂಡರೆ ವಿಷ್ಣುವನ್ನು ಮೋಹಿನಿ ಅವತಾರದಲ್ಲಿ ರಾಕ್ಷಸರಿಂದ ಕಾಪಾಡಿದ ಶಿವನು ಸಹ ದೊಡ್ಡವನೆ.

**ಜಲಂಧರ್ :–** ಅಪ್ಪಯ್ಯ ಸ್ವಾಮಿಗಿಂತ ವಿಷ್ಣು ದೊಡ್ಡವನೆಂದಿದ್ದೀರಾ. ವಿಷ್ಣುವಿಗಿಂತ ಶಿವ ದೊಡ್ಡವನೆಂದ್ದೀರ. ವಿಷ್ಣು ಶಿವನಿಗಿಂತ ಕಡಿಮೆಯವನಾದರು ಅವರ ವರದಿಂದ ಹುಟ್ಟಿದ ಅಪ್ಪಯ್ಯಸ್ವಾಮಿಯನ್ನು ಆರಾಧಿಸುವುದಕ್ಕಿಂತ ಆತನಿಗಿಂತ ದೊಡ್ಡವರಾದ ವಿಷ್ಣುವನ್ನೋ ಶಿವನನ್ನೋ ಆರಾಧಿಸಬಹುದಲ್ಲವೆ.

**ಹಾಲು :–** ಹಾಗೆಂದುಕೊಳ್ಳುತ್ತಾ ಹೋದರೆ ತ್ರಿಮೂರ್ತಿಗಳನ್ನು ಹುಟ್ಟಿಸಿದ ಆದಿಪರಾಶಕ್ತಿ ಎಂಬ ದೇವತೆ ದೊಡ್ಡದಾಗುತ್ತದೆ. ಯಾರ ಇಷ್ಟ ಅವರದು, ಯಾರಿಗೆ ಇಷ್ಟಬಂದ ದೇವರನ್ನು ಅವರು ಪೂಜಿಸಿಕೊಳ್ಳಬಹುದು.

**ಜಲಂಧರ್ :–** ಪೂಜೆಗಳು ಪುನಸ್ಕಾರಗಳು ಮಾತುಗಳಲ್ಲಿ ಹೇಳುವಂತವುಗಳಲ್ಲ. ಪ್ರತಿ ವರ್ಷ ಕೆಲವು ಕೋಟಿ ರೂಪಾಯಿಗಳು ದೇವತೆಗಳ ಪೂಜೆಗಳಿಗೆ ಖರ್ಚಾಗುತ್ತಿದೆ. ಎಷ್ಟೋ ಜನ ತೀರ್ಥಯಾತ್ರೆಗಳ ರೂಪಗಳಲ್ಲಿ ಎಷ್ಟೋ ಕಷ್ಟಗಳು ಅನುಭವಿಸುತ್ತಿದ್ದಾರೆ. ಎಷ್ಟೋ ಸಾರಾಂಶವಿರುವ ದೇವರನ್ನು ಯಾರಿಗಿಷ್ಟ ಬಂದಂತೆ ಅವರು ಮುಗಿಯಬಹುದೆಂದು ಏಕೆ ಅಂದುಕೊಳ್ಳಬೇಕು? ಅಂಗಡಿ ಯಲ್ಲಿ ಹಣಕೊಟ್ಟಾಗ ಕೊಡುವ ಅಕ್ಕಿ ಒಳ್ಳೆಯವಾ ಅಥವಾ ಅಲ್ಲವಾ, ಕೊಡುವ ಸರಕುಗಳು ಒಳ್ಳೆಯವಾ ಅಲ್ಲವಾ ಎಂದು ನೋಡುತ್ತೇವೆ. ಲೆಕ್ಕಾಚಾರದಲ್ಲಿ ನೂರಕ್ಕೆ ಸಾವಿರಕ್ಕೆ ವ್ಯತ್ಯಾಸ ತಿಳಿಯುವುದು. ನೂರು ಕೊಟ್ಟು ಸಾವಿರ ಅಂದುಕೊ ಎಂದರೆ ಹಾಗೆ ಅಂದುಕೊಳ್ಳುತ್ತೇವೆಯೆ? ಸಾವಿರ ಅಲ್ಲ ನೂರೇ ಕೊಟ್ಟಿದ್ದೀಯ ಅನ್ನುತ್ತೇವೆ. ಕೊನೆಗೆ ಅಡಿಕೆ ಹತ್ತಿರ ಸಹ ಇದು ಒಳ್ಳೆ ಅಡಿಕೇನಾ ಗೋಟು ಅಡಿಕೇನಾ ಎಂದು ನೋಡುತ್ತೇವೆ. ಕೊಟ್ಟಿರುವುದು ರೂಪಾಯಿಯೆ ಆದರೂ

ಅದು ಸ್ವಲ್ಪ ಹರಿದಿದ್ದಾದರೂ ಈ ರೂಪಾಯಿ ಚೆನ್ನಾಗಿಲ್ಲ, ಒಳ್ಳೆಯದು ಕೊಡು ಅನ್ನುತ್ತೇವೆ. ಇವೆಲ್ಲದರಲ್ಲಿ ಲೆಕ್ಕ ಸರಿಯಾಗಿ ನೋಡಿಕೊಳ್ಳುವ ನಾವು ದೇವರ ಹತ್ತಿರಕ್ಕೆ ಬರುವ ಹೊತ್ತಿಗೆ ಯಾವ ದೇವರಾದರೇನು, ಯಾವುದೊ ಒಂದು ದೇವರು ನಮಗಿಷ್ಟಬಂದವನೆಂದು ಏಕೆ ಅಂದುಕೊಳ್ಳಬೇಕು? ಅಪ್ಪಯ್ಯಸ್ವಾಮಿಗಿಂತ ವಿಷ್ಣುವು ದೊಡ್ಡವನಾದಾಗ ವಿಷ್ಣುವನ್ನು ಏಕೆ ದೊಡ್ಡದಾಗಿ ಇಟ್ಟುಕೊಳ್ಳಬಾರದು. ನಮ್ಮ ಮನಸ್ಸನ್ನು ಇಟ್ಟು ಪೂಜೆ ಮಾಡುವ ದೇವರುಗಳೆ ಚಿಕ್ಕ ದೊಡ್ಡವರಾದಾಗ ಅವರಲ್ಲಿ ದೊಡ್ಡ ದೇವರನ್ನು ಏಕೆ ಆರಿಸಿಕೊಳ್ಳಬಾರದು. ಅಪ್ಪಯ್ಯಸ್ವಾಮಿಗಿಂತ ದೊಡ್ಡವರು ಇಲ್ಲವೆ?

**ಸಕ್ಕರೆ :–** ಕ್ರೈಸ್ತರಿಗೆ ಒಬ್ಬ ಯಹೋವಾ ಇದ್ದಂತೆ, ಮುಸ್ಲೀಮ್‌ರಿಗೆ ಒಬ್ಬ ಅಲ್ಲಾ ಇದ್ದಂತೆ ನಮಗೆ ಒಬ್ಬ ದೇವರು ಇಲ್ಲವಲ್ಲ! ಮೂವತ್ತು ಮೂರು ಕೋಟಿ ಜನ ದೇವತೆಗಳಿದ್ದಾರೆ. ಅದರಲ್ಲಿ ಒಬ್ರನ್ನು ಮೀರಿ ಒಬ್ಬರಿದ್ದಾರೆ. ಯಾವ ದೇವರು ದೊಡ್ಡವನೆಂದು ಅಳೆಯಬೇಕು?

**ಜಲಂಧರ್ :–** ಕ್ರೈಸ್ತವರಿಗೆ ದೇವರನ್ನು ಕುರಿತು ಬೋಧಿಸುವುದಕ್ಕೆ ಪರಿಶುದ್ಧ ಗ್ರಂಥ ಬೈಬಿಲ್ ಇದೆ. ಹಾಗೆ ಮುಸ್ಲೀವ್‌ರಿಗೆ ಅಲ್ಲಾವನ್ನು ಕುರಿತು ಬೋಧಿಸುವುದಕ್ಕೆ ಪವಿತ್ರ ಗ್ರಂಥ ಖುರಾನ್ ಇದೆ. ಹಿಂದುಗಳಿಗೆ ದೇವರನ್ನು ಕುರಿತು ಬೋಧಿಸುವುದಕ್ಕೆ ಇಂತಹ ಗ್ರಂಥವಿದೆಯೆಂದು ನಿಮಗೆ ತಿಳಿದಿದೆಯೆ?

**ಹಾಲು :–** ಏಕೆ ತಿಳಿದಿಲ್ಲ ಹಿಂದುಗಳಿಗೆ ಮುಖ್ಯಗ್ರಂಥಗಳು ವೇದಗಳಿವೆ ಅಲ್ಲವೆ!

**ಜಲಂಧರ್ :–** ಅಲ್ಲಿಯೇ ನೀವು ಕೆಸರಲ್ಲಿ ಕಾಲು ಹಾಕಿದ್ದೀರ. ಹಿಂದುಗಳಿಗೆ ವೇದಗಳಿಗಿಂತ ಮುಖ್ಯವಾದ ಗ್ರಂಥ ಭಗವದ್ಗೀತೆ ಇದೆ.

**ಉಪ್ಪು :–** ಹಿಂದೂಗಳಿಗೆ ಮುಖ್ಯ ಗ್ರಂಥಗಳು ವೇದಗಳೆಂದು ಎಲ್ಲರಿಗು ತಿಳಿದಿದೆ, ಭಗವದ್ಗೀತೆ ನಿನ್ನೆ ಅಥವಾ ಮೊನ್ನೆ ಐದುಸಾವಿರ ವರ್ಷಗಳ ಹಿಂದೆ ಬಂದಿದೆ. ವೇದಗಳು ಮೊದಲಿನಿಂದ ಇವೆ. ದ್ವಾಪರಯುಗದ ಕೊನೆಯಲ್ಲಿ ಗೀತೆ ಬಂದಿದೆ. ಅದಕ್ಕಿಂತ ಮೊದಲ ಯುಗಗಳಾದ ಕೃತಯುಗ, ತ್ರೇತಾಯುಗದಲ್ಲಿ ಸಹ ಹಿಂದೂ

ಮತ ಇದೆ. ಆಗಲೂ ಸಹ ವೇದಗಳು ಇವೆ. ವೇದಗಳು ಹಿಂದುಗಳ ಪ್ರಮಾಣಗ್ರಂಥಗಳೆಂದು ಎಲ್ಲರಿಗೂ ತಿಳಿದಿದೆ.

**ಜಲಂಧರ್ :–** ಹಿಂದುಗಳಿಗೆ ಒಬ್ಬ ದೇವನಿದ್ದಾನೆಂದು ಬೋಧಿಸಿರುವುದು ವೇದಗಳಲ್ಲ. ವೇದಗಳು ಮೂವತ್ತು ಮೂರು ಕೋಟಿ ದೇವತೆಗಳನ್ನು ಕುರಿತು ಅವರ ಆರಾಧನೆಗಳನ್ನು ಕುರಿತು ಬೋಧಿಸಿವೆ. ಇಂದೂ ದೇಶದಲ್ಲಿ ಹದಿನಾರು ಕೋಟಿ ಜನಸಂಖ್ಯೆಯಿದ್ದ ಹದಿನಾಲ್ಕನೆ ಶತಮಾನದಲ್ಲಿಯು ಸಹ ಹದಿನಾರು ಕೋಟಿ ಜನಸಂಖ್ಯೆಗೆ ಮೂವತ್ತು ಮೂರು ಕೋಟಿ ದೇವತೆಗಳನ್ನು ವೇದಗಳು ತಿಳಿಸಿವೆ. ಇದನ್ನು ನೋಡಿ ಹೇತುವಾದಿಗಳು ಪ್ರಶ್ನಿಸಿದರೆ ಅವರ ವಾದಕ್ಕೆ ಉತ್ತರ ಇಲ್ಲದಂತಾಗಿದೆ. ಹೇತುವಾದಿಗಳಿಗು ಸಹ ಶಾಸ್ತ್ರಬದ್ಧವಾಗಿ ಉತ್ತರ ಹೇಳುವಂತದ್ದು ಒಂದೇ ಒಂದು ಭಗವದ್ಗೀತೆ. ಭಗವದ್ಗೀತೆ ದ್ವಾಪರಯುಗದಿಂದಲ್ಲ, ಸೃಷ್ಠಿ ಆದಿಯಿಂದಲು ಇದೆ. ವೇದಗಳಿಗಿಂತ ಮೊದಲಿನಿಂದಿರುವುದು ಭಗವದ್ಗೀತೆ ಎನ್ನುವ ವಿವರ ಬಹಳ ಜನರಿಗೆ ತಿಳಿದಿಲ್ಲ. ಮೊದಲು ಹುಟ್ಟಿದ ಕಿವಿಗಳಿಗಿಂತ ಹಿಂದೆ ಹುಟ್ಟಿದ ಕೋಡುಗಳೆ ದೊಡ್ಡದಾಗಿ ಕಾಣಿಸಿದಂತೆ, ಮೊದಲಿನಿಂದಿದ್ದ ಭಗವದ್ಗೀತೆಗಿಂತ ಹಿಂದೆ ಬಂದ ವೇದಗಳು ದೊಡ್ಡದಾಗಿ ಕಾಣಿಸುತ್ತಿವೆ. ಅಷ್ಟು ಮಾತ್ರಕ್ಕೆ ಮುಂದೆ ಯಾವುದು ಹಿಂದೆ ಯಾವುದು ಎಂದು ಯೋಚಿಸದೆ ಮಾತನಾಡಿದರೆ ಹೇಗೆ?

**ಸಕ್ಕರೆ :–** ಇಲ್ಲಿ ನನ್ನದೊಂದು ಪ್ರಶ್ನೆ, ವೇದಗಳು ಅಪೌರುಷಗಳೆಂದು ಹೇಳಲ್ಪಟ್ಟಿವೆ. ಅಪೌರುಷಗಳೆಂದರೆ ಅವುಗಳನ್ನು ಯಾವ ಪುರುಷನಾಗಲಿ ಬರೆದಿಲ್ಲವೆಂದು ಅರ್ಥ. ಭಗವದ್ಗೀತೆಯನ್ನೇನೊ ಇಂತಹ ಕೃಷ್ಣನು ಹೇಳಿದ್ದಾನೆಂದು ಹೇಳುತ್ತಿದ್ದೇವೆ. ಮನುಷ್ಯರಿಂದ ಹೇಳಲಾದ ಗೀತೆಗಿಂತ, ಯಾವ ಮನುಷ್ಯ ಹೇಳದ ವೇದಗಳು ದೊಡ್ಡವಲ್ಲವೆ!

**ಜಲಂಧರ್ :–** ಅಪೌರುಷಗಳೆಂದರೆ ಪುರುಷನ ಕುರಿತು ಹೇಳಿರುವವು ಅಲ್ಲವೆಂದು ಅರ್ಥ. ವೇದಗಳನ್ನು ಮನುಷ್ಯರು ಬರೆದಿದ್ದಾರೆ. ವೇದಗಳನ್ನು ದೇವರು ಹೇಳಿಲಿಲ್ಲ. ವೇದಗಳಲ್ಲಿ ಪುರುಷನಾದ ದೇವರನ್ನು ಕುರಿತು ಇಲ್ಲ. ವೇದಗಳಲ್ಲಿ ಪ್ರಕೃತಿ

ಸ್ವರೂಪವಾದ (ಸ್ತ್ರೀ ಸ್ವರೂಪವಾದ) ದೇವತೆಗಳನ್ನು ಕುರಿತು ಇದೆ. ಪುರುಷನಾದ ದೇವರನ್ನು ಕುರಿತು ಅದರಲ್ಲಿ ಇಲ್ಲ, ಆದ್ದರಿಂದ ವೇದಗಳು ಅಪೌರುಷಗಳು ಎಂದಿದ್ದಾರೆ. ಪುರುಷನೆಂದರೆ ದೇವರೆಂದು, ಪ್ರಕೃತಿಯೆಂದರೆ ಮಾಯೆ ಎಂದು ತಿಳಿಯಬೇಕು. ವೇದಗಳಲ್ಲಿ ಪ್ರಕೃತಿ ಸ್ವರೂಪವಾದದ್ದೆ ಇದೆ ಆದರೆ ಪುರುಷ ಸ್ವರೂಪವನ್ನು ಕುರಿತು ಇಲ್ಲ. ಗೀತೆ ಹಾಗಲ್ಲ. ಗೀತೆಯನ್ನು ಸ್ವತಃವಾಗಿ ದೇವರು ಸೃಷ್ಠಿ ಆದಿಯಲ್ಲಿ ಹೇಳಿದ್ದಾನೆ. ಅದೇ ವಿಷಯವನ್ನೇ ದ್ವಾಪರಯುಗದಲ್ಲಿ ಕೃಷ್ಣನಿಂದ ಹೇಳಲಾಗಿದೆ. ವೇದಗಳಿಗಿಂತ ಎಷ್ಟೋ ದೊಡ್ಡದು ಭಗವದ್ಗೀತೆ, ಭಗವದ್ಗೀತೆಯಲ್ಲಿ ದೇವರಾದ ಪುರುಷನ ಕುರಿತು ಹೇಳಲಾಗಿದೆ. ವೇದಗಳು ಮನುಷ್ಯರಿಂದ ಹೇಳಲ್ಪಟ್ಟಿವೆ. ಗೀತೆಯೆ ದೇವರಿಂದ ಹೇಳಲಾಗಿದೆ. ಗೀತೆಯಲ್ಲಿಯೆ ಸರ್ವಪ್ರಶ್ನೆಗಳಿಗೆ ಉತ್ತರ ಇದೆ. ನಿಜವಾದ ಹೇತುವಾದ, ನಿಜವಾದ ಪ್ರತಿವಾದವು ಗೀತೆಯೆಂದೇ ತಿಳಿದುಕೊಳ್ಳಿ. ಹೇತುವಾದಕ್ಕೆ ನಾಂದಿ ಭಗವದ್ಗೀತೆಯೇ, ಹಾಗೇ ಉತ್ತರ ಸಹ ಭಗವದ್ಗೀತೆಯೇ. ಹೇತುವಾದ ಪ್ರತಿವಾದ ಎರಡು ಗೀತೆಯಲ್ಲಿಯೇ ಇವೆ. ವೇದಗಳು ಹೇತುವಾದಕ್ಕೆ ನಿಲ್ಲುವುದಿಲ್ಲ. **ಅಸಲಾದ ದೇವರೊಬ್ಬನಿದ್ದಾನೆಂದು ತಿಳಿಸುವುದು ಒಂದೇ ಒಂದು ಭಗವದ್ಗೀತೆ** ಮಾತ್ರವೇಯೆಂದು ಹಿಂದುಗಳು ತಿಳಿದುಕೊಳ್ಳದೆ ಹೋಗಿರುವುದು ಎಷ್ಟೋ ವಿಚಾರಿಸಬೇಕಾದ ವಿಷಯ. ಅಸಲಾದ ಶಾಸ್ತ್ರ, ಎಲ್ಲ ಶಾಸ್ತ್ರಗಳಿಗಿಂತ ಮೀರಿದ ಶಾಸ್ತ್ರ ಭಗವದ್ಗೀತೆಯಾದರೆ ಅದನ್ನು ಬಿಟ್ಟು ಕಟ್ಟು ಕಥೆಗಳನ್ನು ನಂಬಿ ಸ್ತ್ರೀಯರಿಗೆ ಹುಟ್ಟಿದವನೆಂದು, ಪುರುಷರಿಗೆ ಹುಟ್ಟಿದವನೆಂದು ಅಸಲಾದ ದೇವರನ್ನು ಬಿಟ್ಟು ಅನ್ಯದೇವತೆಗಳನ್ನು ಪೂಜಿಸುವುದು ಸರಿಯಾದ ಪದ್ಧತಿಯಲ್ಲ. ನಿಮ್ಮಂತವರು ಇದ್ದಾರೆಂದು ಗೀತೆಯಲ್ಲಿಯು ಸಹ ಮೊದಲೆ ಹೇಳಲಾಗಿದೆ. ನೀವು ಮೂವರು ಮಾಡಿರುವುದು ಗುಣಗಳಿಂದ ಕೂಡಿಕೊಂಡ ಭಕ್ತಿಯೇ ಆಗಲಿ ಗುಣಾತೀತವಲ್ಲ. ಅದರಲ್ಲಿ ಉಪ್ಪು ಕಾಲ್ನಡಿಗೆಯಲ್ಲಿ ಹೋಗಿರುವುದು ತಾಮಸ ಭಕ್ತಿ, ಹಾಲಿಂದು ರಾಜಸಭಕ್ತಿ, ಸಕ್ಕರೆಯದು ಸಾತ್ವಿಕ ಭಕ್ತಿ, ನೀವು ಕಷ್ಟಪಟ್ಟಿದ್ದರು ಅದು ಅಸಲಾದ ಮಾರ್ಗ ಅಲ್ಲವೆಂದು, ಭಕ್ತಿಯಿಂದ ಇತರೆ ದೇವತೆಗಳನ್ನು ಆರಾಧಿಸುವುದರಿಂದ ಅದು ಶ್ರದ್ಧೆಯಿಂದ ಕೂಡಿದ ಭಕ್ತಿಯಾದರು ದಾರಿ ತಪ್ಪಿದ ವಿಧಾನವೇ ಆಗುತ್ತದೆಂದು ಗೀತೆಯಲ್ಲಿ ರಾಜವಿದ್ಯಾ

ರಾಜಗುಹ್ಯಾ ಯೋಗವೆಂಬ ಅಧ್ಯಾಯದಲ್ಲಿ 23ನೇ ಶ್ಲೋಕದಲ್ಲಿ ಈ ವಿಧವಾಗಿ ಹೇಳಿದ್ದಾರೆ.

***ಶ್ಲೋ॥ "ಏಪ್ಯನ್ಯ ದೇವತಾ ಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ***
***ತೇಪಿ ಮಾವೇವ ಕೌಂತೇಯ ಯಜ್ಯಂತ್ಯವಿಧಿ ಪೂರ್ವಕಮ್"***

ಇತರೆ ದೇವತೆಗಳನ್ನು ಶ್ರದ್ಧೆಯಿಂದ ಆರಾಧಿಸಿದರು ಅವರು ನನ್ನನ್ನು ಆರಾಧಿಸಿದಂತೆ ಆಗುತ್ತದೆ ಆದರೆ ಅವರು ದಾರಿ ತಪ್ಪಿದ ಆರಾಧನೆ ಮಾಡುತ್ತಿದ್ದಾರೆ. ಎಂದು ಗೀತೆಯಲ್ಲಿಯು ಸಹ ಇದೆ.

ಇದನ್ನು ಅನುಸರಿಸಿ ನೋಡಿದಾಗ ನೀವು ಮಾಡುವ ಪೂಜೆಗಳು ದಾರಿ ತಪ್ಪಿದವುಗಳೆಂದು ಅವು ದೇವರವರೆಗು ನಿಮ್ಮನ್ನು ಸೇರಿಸುವುದಿಲ್ಲವೆಂದು ತಿಳಿಯುತ್ತಿದೆ. ನೀವು ದೇವರವರೆಗು ಸೇರಬೇಕೆಂದು ಪೂಜಿಸದೆ ಕೋರಿಕೆಗಳಿಗಾಗಿಯೆ ಪೂಜಿಸಿದ್ದೀರ ಆದ್ದರಿಂದ ಅದು ಗುಣಗಳಿಂದ ಕೂಡಿಕೊಂಡಿರುವುದಾಗಿ, ನೀವು ಆರಾಧಿಸಿದ ವಿಧಾನವನ್ನು ಅನುಸರಿಸಿ ರಾಜಸ, ತಾಮಸ, ಸಾತ್ವಿಕಕ್ಕೆ ಸಂಬಂಧಿಸಿದ್ದಾಗಿದೆ. ಗೀತೆಯಲ್ಲಿ ಹೇಳಿದ ಹಾಗೆ ಗುಣರಹಿತವಾಗಲಿಲ್ಲ.

ಯಾರು ಎಷ್ಟು ಕೋರಿದರು ಆ ಕೋರಿಕೆಗಳು ನೆರವೇರುತ್ತವೆಂದು ಕೊಳ್ಳುವುದು ತಪ್ಪು. ಯಾರ ಕರ್ಮಫಲದ ಪ್ರಕಾರ ಅವರಿಗೆ ನಡೆಯುತ್ತದೆ. ಹಾಗಲ್ಲದೆ ಮುಗಿಯುವವನಿಗೆ ಕೊಡುವುದು, ಮುಗಿಯದವನಿಗೆ ಕೊಡದೆ ಹೋಗುವುದೆನ್ನುವದು ದೇವರ ವಿಧಾನದಲ್ಲಿ ಇಲ್ಲವೇ ಇಲ್ಲ.

ಇದೆಲ್ಲವು ನೋಡಿದರೆ ದೇವರಿದ್ದಾನೆಂಬ ಮಾತು ಶಾಸ್ತ್ರಬದ್ಧ, ವಾಸ್ತವ. ಆದರೆ ನೀವು ನಡೆದ ವಿಧಾನ ಸರಿಯಾದುದಲ್ಲ. ಆದ್ದರಿಂದ ನಿಮ್ಮ ತಮ್ಮಂದಿರಿಗೆ ನಿಮ್ಮ ತಂದೆಗೆ ವಿರುದ್ದವಾಗಿ ಕಾಣಿಸಿದೆ. ಅವರ ನಾಸ್ತಿಕವಾದಕ್ಕೆ ಸರಿಯಾದ ಉತ್ತರ ಇಲ್ಲದೆ ಹೋಗಿದೆ. ನಾನು ದೇವರಿದ್ದಾನೆಂದು ನಿಮ್ಮನ್ನು ಸಮರ್ಥಿಸಿದರು ನಿಮ್ಮ ಭಕ್ತಿಯನ್ನು, ನಿಮ್ಮ ಭಕ್ತಿ ವಿಧಾನವನ್ನು ಸಮರ್ಥಿಸಲಾರೆನು. ಮನುಷ್ಯನಿಗೆ ಭಕ್ತಿ ಎನ್ನುವದು ಅವಶ್ಯವೇ, ಹಾಗೆಂದು ಅದು ಮೂಢಭಕ್ತಿ ಆಗಬಾರದು. ಮನುಷ್ಯನಿಗೆ ದೇವರನ್ನು ಕುರಿತು ತಿಳಿದುಕೊಳ್ಳುವ ಜ್ಞಾನ ಅವಶ್ಯವೇ, ಹಾಗೆಂದು

ಅದು ದೇವತೆಗಳ ಜ್ಞಾನ ಆಗಬಾರದು. ಸರ್ವಕ್ಕು ಸೃಷ್ಠಿಕರ್ತನಾದ ದೇವರನ್ನು ಆರಾಧಿಸುವುದು ಒಳ್ಳೆಯದೇಯಾಗಲಿ ದೇವರಿಂದ ಸೃಷ್ಠಿಸಲ್ಪಟ್ಟ ದೇವತೆಗಳನ್ನು ಆರಾಧಿಸುವುದು ಒಳ್ಳೆಯದಲ್ಲ.

**ಸಕ್ಕರೆ :–** ಹಾಗಾದರೆ ಯಾರ ಯಾರನ್ನು ಆರಾಧಿಸಬೇಕು? ಯಾರು ದೇವರು?

**ಜಲಂಧರ್ :–** ಈ ಪ್ರಶ್ನೆಗಳು ನಿಮ್ಮಿಂದ ಬರಬೇಕೆಂದೇ ನಾನು ಕೋರಿ ಕೊಳ್ಳುತ್ತಿದ್ದೇನೆ. ದೇವತೆಗಳೆಲ್ಲರಿಗು ದೇವನಾದವನೇ ನಿನಗೆ ದೇವರು. ಗೀತಾ ಶಾಸ್ತ್ರದಲ್ಲಿ ಯಾವ ದೇವರನ್ನು ಪರಮಾತ್ಮ ಎಂದಿದ್ದಾರೊ ಆ ದೇವನನ್ನೇ ಆರಾಧಿಸು, ಆಗ ನೀನು ಸಕ್ರಮವಾದ ವಿಧಾನವನ್ನು ಅನುಸರಿಸಿದವನಾಗುತ್ತೀಯ.

**ಹಾಲು :–** ಎಲ್ಲರ ದೇವತೆಗಳಿಗಿಂತ ದೊಡ್ಡವನು ಪರಮಾತ್ಮ ಅನ್ನುತ್ತಿದ್ದೀಯ, ಸರಿ ನಾವು ಒಪ್ಪಿಕೊಳ್ಳುತ್ತೇವೆ. ನಮ್ಮ ತಂದೆ ನಮ್ಮ ತಮ್ಮಂದಿರು ಈ ಮಾತನ್ನು ಒಪ್ಪಿಕೊಳ್ಳುವುದಿಲ್ಲ, ಅವರ ಮಾತೇನೋ ನೀನೇ ಕೇಳು.

ಅಷ್ಟಕ್ಕೆ ಜಲಂಧರ್ ಆಸ್ತಿಕವಾದಿಗಳಾದ ಸಕ್ಕರೆ, ಹಾಲು, ಉಪ್ಪಿನೊಂದಿಗೆ ಸಂಭಾಷಣೆ ಮುಗಿಸಿ ನಾಸ್ತಿಕವಾದಿಗಳಾದ ಆಚಾರಿ, ಬೆಣ್ಣೆ, ಸೊನ್ನೆಯೊಂದಿಗೆ ಮಾತನಾಡಲು ಪ್ರಾರಂಭಿಸಿದನು.

**ಜಲಂಧರ್ :–** ನೀವು ದೇವರು ಇಲ್ಲವೆಂದು ಹೇಗೆ ಅನ್ನುತ್ತಿದ್ದೀರಾ? ಅದಕ್ಕೇನಾದರೂ ಆಧಾರವಿದೆಯ?

**ಸೊನ್ನೆ :–** ದೇವರು ಎಂಬ ಪದವೇ ಕಲ್ಪನೆ. ಆಸ್ತಿಕವಾದಿಗಳು ಕಲ್ಪಿಸಿಕೊಂಡ ದೇವರು ನಿಜವಾಗಿ ಇಲ್ಲ.

**ಜಲಂದರ್ :–** ಇಲ್ಲ ಎನ್ನುವುದು, ಕಲ್ಪನೆ ಎನ್ನುವುದು ಒಣ ಮಾತೇ ಆಗಲಿ ಅದು ಉತ್ತರವಲ್ಲ. ಶಾಸ್ತ್ರಬದ್ಧವಾದ ಆಧಾರವೇನಾದರೂ ನಿಮ್ಮ ಬಳಿ ಇದೆಯಾ?

**ಆಚಾರಿ :–** ಶಾಸ್ತ್ರಬದ್ಧವಾದ ಆಧಾರ ಒಂದಿದೆ. ಅದೇನೆಂದರೆ ವಿಶ್ವವೆಲ್ಲ ಪದಾರ್ಥದಿಂದ ಕೂಡಿಕೊಂಡಿದೆ. ಪದಾರ್ಥ ಶಕ್ತಿಯಾಗಿ ಬದಲಾವಣೆ ಹೊಂದುತ್ತದೆ, ಶಕ್ತಿ ಮತ್ತೆ ಪದಾರ್ಥವಾಗಿ ಬದಲಾಗುತ್ತದೆ. ಇದು ಸಹಜ

ಸಿದ್ಧವಾಗಿ ನಡೆಯುತ್ತಿರುವ ಪ್ರಪಂಚ ಬದಲಾವಣೆ ಮಧ್ಯದಲ್ಲಿ ದೇವರು ಎಲ್ಲಿಂದ ಬಂದಿದ್ದಾನೆ.

**ಜಲಂಧರ್ :** ಪದಾರ್ಥ ಶಕ್ತಿಯಾಗಿ, ಶಕ್ತಿ ಪದಾರ್ಥವಾಗಿ ಬದಲಾಗುತ್ತಿದೆಯೆಂದು ಐದನೆ ತರಗತಿ ಓದಿಕೊಂಡವನಿಗು ಸಹ ಗೊತ್ತಿದೆ. ದೇವರು ಇಲ್ಲ ಎನ್ನುವುದಕ್ಕು ಈ ಮಾತಿಗು ಸಂಬಂಧವೇನಿದೆ.

**ಬೆಣ್ಣೆ :** ನಮ್ಮ ಹೇತುವಾದದ ಪ್ರಕಾರ ಚಲಿಸದ ಪದಾರ್ಥ ಚಲಿಸುವ ಶಕ್ತಿಯಾಗಿ ತಯಾರಾಗುತ್ತಿದೆ. ಆ ಶಕ್ತಿಯನ್ನೇ ಜೀವ ಅನ್ನುತ್ತಿದ್ದಾರೆ. ಅದು ಜೀವವಲ್ಲ ಎಂದು ನಾವು ಅನ್ನುತ್ತಿದ್ದೇವೆ.

**ಜಲಂಧರ್ :–** ಶಕ್ತಿಯನ್ನು ಜೀವ ಅನ್ನುತ್ತಿದ್ದಾರೆ ಅದು ಜೀವವಲ್ಲ ಎಂದು ನೀವು ಅನ್ನುತ್ತಿದ್ದೀರ. ಸರಿ ಆ ಶಕ್ತಿಗೆ ಮತ್ತೇನಾದರು ಹೆಸರು ಇಡಬಹುದಾ?

**ಬೆಣ್ಣೆ :–** ಹಾಗೆ ಹೆಸರಿಡುವುದಕ್ಕೆ ಅವಕಾಶವಿಲ್ಲ.

**ಜಲಂಧರ್ :–** ಹಾಗಾದರೇ ಅದನ್ನು ಶಕ್ತಿ ಎಂದೇ ನೀವೇಕೆ ಹೆಸರಿಟ್ಟಿದ್ದೀರ?

**ಬೆಣ್ಣೆ :–** ಪದಾರ್ಥದಿಂದ ಬರುವ ಶಕ್ತಿಯನ್ನು ಶಕ್ತಿ ಅನ್ನದೆ ಏನನ್ನಬೇಕು?

**ಜಲಂಧರ್ :–** ಶಕ್ತಿಯನ್ನು ದೇವರೆಂದು ಏಕನ್ನಬಾರದು.

**ಬೆಣ್ಣೆ :–** ದೇವರಾದರೆ ಕಾಲುಗಳು, ಕೈಗಳು, ಶಿರಸ್ಸು ಇದ್ದು ರೂಪ ಹೊಂದಿ ಇರುತ್ತಾನಲ್ಲವೆ! ಅಂತಹ ರೂಪವಿಲ್ಲ ಆದ್ದರಿಂದ ಶಕ್ತಿಯನ್ನು ದೇವರೆನ್ನುವುದಕ್ಕೆ ಅವಕಾಶವಿಲ್ಲ.

**ಜಲಂಧರ್ :–** ದೇವರಿಗೆ ರೂಪವಿದೆಯೆಂದು ಯಾರು ಹೇಳಿದ್ದಾರೆ?

**ಸೊನ್ನೆ :–** ಭೂಮಿ ಮೇಲೆ ಪ್ರಜೆಗಳೆಲ್ಲರು ದೇವರ ರೂಪವನ್ನು ಇಟ್ಟುಕೊಂಡೇ ಅಲ್ಲವೆ ಪೂಜಿಸುತ್ತಾ ಇರುವುದು. ನಾಲ್ಕು ಕೈಗಳಿರುವವನು ವಿಷ್ಣು, ನಾಲ್ಕು ತಲೆಗಳು ಇರುವವನು ಬ್ರಹ್ಮ ಅನ್ನುತ್ತಿರುತ್ತಾರಲ್ಲವೆ!

**ಜಲಂಧರ್ :–** ವಿಷ್ಣು, ಬ್ರಹ್ಮ ಆಕಾರವಿರುವ ದೇವರುಗಳು, ನಿಮ್ಮ ಅಣ್ಣಂದಿರು ಮೂವರು ಅಂತವರನ್ನು ಪೂಜಿಸುತ್ತಿದ್ದಾರೆ ಆದ್ದರಿಂದ ಅದು ತಪ್ಪು

ಮಾರ್ಗವೆಂದು, ಸರಿಯಾದ ಮಾರ್ಗವಲ್ಲವೆಂದು ಹೇಳಿದ್ದೇವೆ. ವಿಷ್ಣುವನ್ನು, ಬ್ರಹ್ಮನನ್ನು ದೇವರಲ್ಲ ಎಂದು ಗೀತಾಶಾಸ್ತ್ರವು ಸಹ ಹೇಳುತ್ತಿದೆ.

ಗೀತಾಶಾಸ್ತ್ರದ ಪ್ರಕಾರ ದೇವರಿಗೆ ರೂಪವಿಲ್ಲವೆಂದು ಇದೆ, ಆದರೆ ರೂಪವಿರುವವನು ದೇವರೆಂದು ಎಲ್ಲಿಯು ಹೇಳಿಲ್ಲ.

**ಸೊನ್ನೆ :** ವೇದಗಳಲ್ಲಿ ಇದೆಯಲ್ಲ!

**ಜಲಂಧರ್ :–** ವೇದಗಳು ಶಾಸ್ತ್ರಗಳಲ್ಲ. ಶಾಸ್ತ್ರಗಳಲ್ಲಿ ಇದ್ದರೆ ಹೇಳು.

**ಬೆಣ್ಣೆ :–** ಆದರೆ ದೇವರ್‍ಯಾರನ್ನುತ್ತೀಯ.

**ಜಲಂಧರ್ :–** ನೀನು ಹೇಳುತ್ತಿರುವ ಶಕ್ತಿಯನ್ನೇ ದೇವರನ್ನುತ್ತಿದ್ದೇವೆ.

**ಸೊನ್ನೆ :–** ಶಕ್ತಿಯನ್ನು ಜೀವವೆನ್ನುವುದು ಕೇಳಿದ್ದೇವೆ. ದೇವರೆಂದು ಯಾರು ಹೇಳಿಲ್ಲವೆ.

**ಜಲಂಧರ್ :–** ದೈವವು ಶಕ್ತಿ ಸ್ವರೂಪವೆಂದು ನಾವನ್ನುತ್ತಿದ್ದೇವೆ ಅಲ್ಲವೆಂದು ನೀನನ್ನಬಲ್ಲೆಯಾ?

**ಬೆಣ್ಣೆ :–** ಪದಾರ್ಥದಿಂದ ಬಂದಿರುವುದೆ ಶಕ್ತಿ. ಆದ್ದರಿಂದ ದೇವರು ಪದಾರ್ಥದಿಂದ ಹುಟ್ಟಿದ್ದಾನೆನ್ನುತ್ತೀಯಾ?

**ಜಲಂಧರ್ :–** ಪದಾರ್ಥದಿಂದ ಹುಟ್ಟಿರುವುದು ಶಕ್ತಿಯಾದಾಗ ಪದಾರ್ಥದಿಂದ ಶಕ್ತಿ ಹುಟ್ಟಿದೆಯೆನ್ನುವುದರಲ್ಲಿ ತಪ್ಪಿಲ್ಲ ತಾನೆ! ಶಕ್ತಿಯನ್ನು ದೇವರೆಂದಾಗ ಪದಾರ್ಥದಿಂದಲೆ ದೇವರು ಹುಟ್ಟಿದ್ದಾನೆನ್ನುವುದರಲ್ಲಿ ತಪ್ಪಿಲ್ಲವಲ್ಲ!

**ಬೆಣ್ಣೆ :** ಆದರೇ ಪದಾರ್ಥ 105 ಮೂಲಕಗಳಾಗಿ ಇದೆ. ಅವುಗಳಲ್ಲಿ ಶಕ್ತಿ 105 ವಿಧಗಳಾಗಿರುವುದು ಆದರೆ ದೇವರು 105 ವಿಧಗಳಾಗಿ ಇರುತ್ತಾನಾ?

**ಜಲಂಧರ್ :** ಪದಾರ್ಥಗಳು 108 ಎಂದು ಯಾವಾಗಲೊ ಸೈನ್ಸ್ (ವಿಜ್ಞಾನ) ಅಭಿವೃದ್ಧಿಯಾಗದ ಕಾಲದಲ್ಲಿಯೆ ಕೃತಯುಗದಲ್ಲಿಯೆ ಪೂರ್ವಿಕರು ಹೇಳಿದ್ದಾರೆ. ಎಲ್ಲ ಪದಾರ್ಥಗಳಲ್ಲಿ ಶಕ್ತಿ ಬಿಡಿಬಿಡಿಯಾಗಿ ಇದ್ದರೂ ಶಕ್ತಿ ಅನ್ನುವುದು ಒಂದೇಯೆಂದು ಸಹ ಹೇಳಿದ್ದಾರೆ.

**ಸೊನ್ನೆ :** ಸೈನ್ಸ್ ಅಭಿವೃದ್ಧಿಯಾದ ನಂತರವೇ ಪದಾರ್ಥ 105 ಮೂಲಕಗಳಾಗಿ ಇದೆಯೆಂದು ತಿಳಿದಿದೆ ಸೈನ್ಸ್ ಪ್ರಕಾರವೆ ಹೇಳಿದ್ದಾರೆ 108 ಎಂದು ಮೊದಲೆ ಹೇಳಿದ್ದಾರೆನ್ನುವುದು ಅಸತ್ಯ.

**ಜಲಂಧರ್ :–** ಜಪಮಾಲೆ ಕೃತಯುಗದಲ್ಲಿಯೆ ನಿನಗೆ ತಿಳಿದ ಸೈನ್ಸ್ ಹುಟ್ಟುವ ಮೊದಲೆ ಹುಟ್ಟಿದೆ. ಜಪಮಾಲೆಗಳಲ್ಲಿ 108 ಮಣಿಗಳಿವೆ. 108 ಮಣಿಗಳ ಮಾಲೆಗಳಲ್ಲಿ ಕೊನೆಗೆ ದೊಡ್ಡ ಮಣಿಯು ಸಹ ಇದೆ. 108 ಮಣಿಗಳು 108 ಪದಾರ್ಥಗಳಿಗೆ ಗುರುತೆಂದು ಅಂದೇ ತಿಳಿಸಿದ್ದಾರೆ. ಎಲ್ಲ ಮಣಿಗಳ ಹಾಗೆ ಒಂದು ಮಣಿ ದೊಡ್ಡದಾಗಿರುವುದು ಎಲ್ಲದರಲ್ಲಿರುವ ಶಕ್ತಿ ಒಂದೇಯೆಂದು ತಿಳಿದುಕೊಳ್ಳುವುದಕ್ಕಾಗಿಯೆ ಎಂದು ಹೇಳಿದ್ದಾರೆ. ಈ ದಿನ ನೀವು ಹೇಳುವ ಪದಾರ್ಥವನ್ನು ಪದ ವಿಶ್ಲೇಷಣೆ ಮಾಡಿ ಯಾವಾಗಲೊ ಅದರ ಅರ್ಥವನ್ನು ಸಹ ಹೇಳಿದ್ದಾರೆ. **ಪದ+ಅರ್ಥ=ಪದಾರ್ಥ ಎಂದು ಹೇಳಿದ್ದಾರೆ. ಪದ ಎಂದರೆ ಭಾಗ ಎಂದು, ಅರ್ಥ ಎಂದರೆ ಸಾರಾಂಶವಾದ ಶಕ್ತಿ ಎಂದು ತಿಳಿಸಿದ್ದಾರೆ.** ಪದಾರ್ಥ ಎಂದರೆ ಒಂದು ಭಾಗದಲ್ಲಿ ಅಡಗಿರುವ ಶಕ್ತಿ ಎಂದು ಹೇಳಿದ್ದಾರೆ. ಪ್ರತಿ ಪದಾರ್ಥದಲ್ಲಿಯು ದೇವರು ಅಣುವಣುವಿನಲ್ಲಿಯು ವ್ಯಾಪಿಸಿದ್ದಾನೆಂದು ಸಹ ಹೇಳಿದ್ದಾರೆ. ನೀವು ಪದವನ್ನು ನೋಡುತ್ತಿದ್ದೀರ ಆದರೆ ಅದರಲ್ಲಿನ ಶಕ್ತಿಯನ್ನು ನೋಡದಿದ್ದೀರ. ಶಕ್ತಿ ಯಾರಿಗು ಕಾಣಿಸುವಂತದ್ದಲ್ಲ ಶಕ್ತಿ ಪದಾರ್ಥದಲ್ಲಿನ ಅಂತರ್ಭಾಗವೆ ಹೊರತು ಬೇರೆಯಲ್ಲ. ಪದಾರ್ಥದಲ್ಲಿನ ಶಕ್ತಿ ಪದಾರ್ಥವನ್ನೇ ಕದಲಿಸುತ್ತದೆ. ಆ ಕದಲಿಕೆಯನ್ನು ನೀವು ಜೀವ ಎಂದು ಅನ್ನುತ್ತಿದ್ದೀರ. ಅಲ್ಲ ದೇವರು ಎಂದು ನಾನು ಅನ್ನುತ್ತಿದ್ದೇನೆ. ನೀವೇನನ್ನುತ್ತೀರ?

**ಸೊನ್ನೆ :–** ನೀವು ಹೇಳುವುದು ಸೈನ್ಸಿಗೆ ಹತ್ತಿರವಾಗಿಯೆ ಇದೆ. ಹೀಗೆ ಯಾರೂ ಹೇಳಿಲಿಲ್ಲ. ದೇವರೆಂದರೆ ಗುಡಿಯಲ್ಲಿರುವವನೆ ಅಂದುಕೊಂಡಿದ್ದೆವು. ಶಕ್ತಿಯೇ ದೇವರಾದರೆ ಶಕ್ತಿಯನ್ನು ನಾವು ಸಹ ಒಪ್ಪಿಕೊಳ್ಳುತ್ತೇವೆ. ದೇವರವರೆಗು ಸರಿಹೋಗಿದೆ. ಆದರೆ ಪದಾರ್ಥದವೊಂದು ದಶೆಗಳನ್ನು ನಿರ್ಜೀವ, ಜೀವ ಎಂದು, ಪದಾರ್ಥ ಪದಾರ್ಥವಾಗಿ ಇರುವಾಗ ನಿರ್ಜೀವ ಎಂದು,

ಪದಾರ್ಥದಿಂದ ಶಕ್ತಿ ಬಿಡುಗಡೆಯಾದಾಗ ಜೀವ ಎಂದು ಅನ್ನುತ್ತಿರುತ್ತೇವೆ. ಜೀವವೇ ಪ್ರಾಣ ಎಂದು ಕೆಲವರು ಅನ್ನುತ್ತಿರುತ್ತಾರೆ. ಇದನ್ನು ಕುರಿತು ಹೇಳಿರಿ.

**ಜಲಂಧರ್ :** ವಾಸ್ತವಕ್ಕೆ ಪದಾರ್ಥದಲ್ಲಿ ಅಡಗಿರುವುದು ಶಕ್ತಿ ಅದೇ ದೇವರು ಎಂದು ಕರೆದಿದ್ದೇವೆ. ಪದಾರ್ಥ ಪದಾರ್ಥವಾಗಿ ಇರುವಾಗ ನಿರ್ಜೀವ ಎಂದು, ಪದಾರ್ಥದಿಂದ ಶಕ್ತಿ ಬಿಡುಗಡೆಯಾದಾಗ ಜೀವ ಎಂದು ಅನ್ನುವುದು ಶುದ್ಧ ತಪ್ಪು. ಪದಾರ್ಥದಲ್ಲಿ ಅಡಗಿರುವುದು ದೇವರು ಅಥವಾ ದೈವಶಕ್ತಿ. ಅದನ್ನು ಜೀವ ಅನ್ನಬಾರದು. ಜೀವವನ್ನು ಪ್ರಾಣ ಅನ್ನುವುದು ಸಹ ಶುದ್ಧ ತಪ್ಪು. ಪ್ರಾಣ ಬೇರೆ ಜೀವ ಬೇರೆ, ಪ್ರಾಣ ಎಂದರೆ ಗಾಳಿ ಎಂದು ಅರ್ಥ. ನಮ್ಮ ಶರೀರಗಳಲ್ಲಿ ಐದು ಗಾಳಿಗಳಿವೆ. ಅವುಗಳನ್ನೇ ಪಂಚಪ್ರಾಣಗಳು ಅನ್ನುತ್ತೇವೆ. ಜೀವಿಯು ಮಾತ್ರ ಒಬ್ಬನೆ ಇರುವನು. ಜೀವಿಯು ಪ್ರಾಣವಲ್ಲ ಆದರೆ ಜೀವಿಯು ದೇವರಲ್ಲಿನ ಒಂದು ಭಾಗ. ಜೀವಿಯನ್ನು ಒಪ್ಪಿಕೊಂಡರೂ ದೇವರನ್ನು ಒಪ್ಪಿಕೊಳ್ಳಬೇಕಾದ್ದೆ, ಇಲ್ಲವೆ ದೇವರನ್ನು ಒಪ್ಪಿಕೊಂಡರೂ ಜೀವಿಯನ್ನು ಒಪ್ಪಿಕೊಳ್ಳಬೇಕಾದ್ದೆ.

**ಬೆಣ್ಣೆ :–** ದೇವರು ಎರಡು ಭಾಗಗಳಾಗಿ ಏಕಿದ್ದಾನೆ?

**ಜಲಂಧರ್ :–** ಎರಡು ಭಾಗಗಳಲ್ಲ, ಮೂರು ಭಾಗಗಳಾಗಿ ಇದ್ದಾನೆ. ಒಂದು ಕಾರ್ಯದಲ್ಲಿ ಕರ್ತ ಒಂದು, ಕರ್ಮ ಒಂದು, ಕ್ರಿಯೆ ಒಂದು ಇರುವಂತೆ ಈ ವಿಶ್ವದವೊಂದು ಕಾರ್ಯದಲ್ಲಿ ದೇವರು ಮೂರು ಭಾಗಗಳಾಗಿ ಪರಮಾತ್ಮ, ಆತ್ಮ, ಜೀವಾತ್ಮನಾಗಿ ವಿಭಜಿಸಲ್ಪಟ್ಟಿದ್ದಾನೆ.

**ಸೊನ್ನೆ :–** ಕರ್ತ, ಕರ್ಮ, ಕ್ರಿಯೆ ಎಂದರೇನು?

**ಜಲಂಧರ್ :–** ಏನಾದರೂ ಒಂದು ಕಾರ್ಯ ನಡೆಯುವುದಕ್ಕೆ ಒಂದು ಕಾರಣ ಬೇಕು. ಅದನ್ನೇ ಹೇತು ಅನ್ನುತ್ತೇವೆ. ಮಾಡುವವನನ್ನು ಕ್ರಿಯೆ ಅನ್ನುತ್ತೇವೆ, ಮಾಡಿಸುವವನನ್ನು ಕರ್ತ ಅನ್ನುತ್ತೇವೆ. ಮಾಡುವುದಕ್ಕೆ ಕಾರಣ ಏನಾದರೂ ಇರಬಹುದು ಮಾಡಿಸುವವನು, ಮಾಡುವವನು ತಪ್ಪದೆ ಇರಬೇಕು. ವಿಶ್ವ ಹುಟ್ಟುವುದು, ಬೆಳೆಯುವುದು, ಅಂತ್ಯವಾಗುವುದು ಅನ್ನುವವುಗಳನ್ನು ಸೃಷ್ಠಿ,

ಸ್ಥಿತಿ, ಲಯ ಅನ್ನುತ್ತಿದ್ದೇವೆ. ಸೃಷ್ಠಿ, ಸ್ಥಿತಿ, ಲಯ ಎನ್ನುವ ಕಾರ್ಯವನ್ನು ನಡೆಸುವುದಕ್ಕೆ ದೇವರೊಬ್ಬನೆ ಮೂರು ಭಾಗಗಳಾಗಿ ತಯಾರಾಗಿದ್ದಾನೆ. ಮಾಡುವವನು ಕರ್ತ ಪರಮಾತ್ಮ ಎಂದು, ಹೇತುವಾದ ಕರ್ಮ ಆತ್ಮ ಎಂದು, ಮಾಡಲ್ಪಡುವ ಕ್ರಿಯೆಯನ್ನು ಜೀವಾತ್ಮ ಎಂದು ವಿಭಜಿಸಿ ಹೇಳಿಕೊಳ್ಳುತ್ತಿದ್ದೇವೆ. ಕರ್ತ ಕರ್ಮ ಕ್ರಿಯೆ ಮೂರು ಒಂದೇ ಹಾಗೆ ಪರಮಾತ್ಮ, ಆತ್ಮ, ಜೀವಾತ್ಮ ಮೂರು ಒಂದೇ. ಆ ಒಂದೇ ದೇವರು.

**ಬೆಣ್ಣೆ :** ನಾನು ಹೇತುವಾದಿ. ಹೇತು ಎಂದರೆ ಕಾರಣ ಎಂದು ನನಗೆ ತಿಳಿದಿದೆ, ಆದರೆ ಹೇತು ಎಂದರೆ ಕರ್ಮವೆಂದು ನಾನು ಎಲ್ಲಿಯು ಕೇಳಲಿಲ್ಲ. ಅದು ನಮ್ಮ ಸೂತ್ರದಲ್ಲಿ ಇಲ್ಲ.

**ಜಲಂಧರ್ :** ಹೇತು ಎಂದರೆ ಕಾರಣ ಎಂದು ತಿಳಿದಾಗ, ಕಾರಣ ಎಂದರೆ ಕರ್ಮ ಎಂದು ಏಕೆ ತಿಳಿದಿಲ್ಲ. ಕರ್ಮವೆಂದರೆ ಕಾರಣ ಎಂದು ಈಗಲಾದರೂ ಅರ್ಥ ಮಾಡಿಕೊ.

**ಬೆಣ್ಣೆ :–** ಯಾವ ಕೆಲಸಕ್ಕಾದರೂ ಕಾರಣ ಕಾಣಿಸುತ್ತದೆ. ಒಬ್ಬನನ್ನು ಮತ್ತೊಬ್ಬನು ಒಡೆದಿದ್ದಾನೆಂದರೆ ಮೊದಲನೆಯವನು ಎರಡನೆಯವನನ್ನು ದೂಷಿಸಿದ್ದಾನೆ ಆದ್ದರಿಂದ ಅದು ಕಾರಣವಾಗಿದೆ. ಇಲ್ಲಿ ಒಡೆಯುವುದು ಎಂಬ ಕಾರ್ಯಕ್ಕೆ ದೂಷಣೆ ಅನ್ನುವದು ಕಾರಣವಾಗಿದೆ. ನೀನು ಹೇಳುವ ಕರ್ಮ ಏನು ಕಾಣಿಸಲಿಲ್ಲವಲ್ಲ!

**ಜಲಂಧರ್ :–** ಹಾಗೆ ಏಕಂದುಕೊಳ್ಳಬೇಕು ದೂಷಣೆ ಅನ್ನುವುದೆ ಕರ್ಮ ಎಂದು ಅದೇ ಕಾರಣವೆಂದು ಏಕಂದುಕೊಳ್ಳಬಾರದು.

**ಆಚಾರಿ :–** ಕರ್ಮ ದೂಷಣೆ ರೂಪದಲ್ಲಿ ಕಾಣಿಸುತ್ತಿದೆ. ಆದರೆ ದೇವರು ಕಾಣಿಸಿದಂತೆಯೆ?

**ಜಲಂಧರ್ :–** ಸರ್ವವು ದೇವರೇ ಎಂಬ ಸೂತ್ರದ ಪ್ರಕಾರ ಅರ್ಥಮಾಡಿಕೊಂಡರೆ ಎಲ್ಲಾದರೂ ದೇವರಿದ್ದಾನೆ. ನಾವು ಅಂತಹ ಸ್ಥಿತಿಗೆ ಬರಲಿಲ್ಲವಾದ್ದರಿಂದಲೆ ದೇವರು ಎಲ್ಲಿಯು ತಿಳಿದುಬಂದಿಲ್ಲ. ದೂಷಣೆ ಅನ್ನುವುದಕ್ಕೆ ಒಂದು

ಕಾರಣವಿರುತ್ತದೆ. ಕಾರಣವಿಲ್ಲದ ದೂಷಣೆ ಇರುವುದಿಲ್ಲವಲ್ಲವೆ! ಏಕೆ ದೂಷಿಸಿದ್ದೀಯ ಎನ್ನುವ ಕಾರಣಕ್ಕೆ ಕಾರಣವೂ ಸಹ ಇರುವುದು. ಹಾಗೆ ಕಾರಣವನ್ನು ವಿಚಾರಿಸಿಕೊಳ್ಳುತ್ತಾ ಹೋದರೆ ಕಾಣಿಸದ ಕಾರಣ ಒಂದಿದೆಯೆಂದು ತಿಳಿಯುತ್ತಿದೆ. ಆ ಕಾಣಿಸದ ಕಾರಣವನ್ನೇ ಕರ್ಮ ಅನ್ನುತ್ತಿದ್ದೇವೆ. ಕರ್ಮ ಕಾರ್ಯರೂಪವಾದಾಗ ಇದಕ್ಕಿದು ಕಾರಣವೆಂದು ತಿಳಿಯುವುದು. ಉದಾಹರಣೆಗೆ ಒಂದು ಸೀ.ಡಿ ಪ್ಲೇಟಿನಲ್ಲಿ ಗೊಂಬೆ ಕಾಣಿಸದಂತಿರುತ್ತದೆ. ಕಾಣಿಸದ ಗೊಂಬೆ ಸೀ.ಡಿ ಯಿಂದ ಅದು ಪ್ಲೇ ಆದಾಗ ಹೇಗೆ ಕಾಣಿಸುತ್ತದೊ ಹಾಗೆ ನಮ್ಮೊಳಗಿರುವ ಕರ್ಮ ಕಾಣಿಸದೆ ಇದೆ. ಕರ್ಮ ಜಾರಿಗೆ ಬಂದಾಗ ಕಾರ್ಯ ಕಾಣಿಸುತ್ತದೆ. ಕಾರ್ಯಕ್ಕೆ ಮೂಲಸೂತ್ರ ಕರ್ಮ ಎಂದು ಅದು ನಡೆದ ನಂತರ ತಿಳಿಯುತ್ತದೆಂದು ಗ್ರಹಿಸಬೇಕು. ನಡೆಯದ ಮೊದಲು ತಿಳಿಯದ ಕರ್ಮ, ನಡೆದ ನಂತರ ತಿಳಿಯುತ್ತದೆ. ಹಾಗೆ ನಮ್ಮಲ್ಲಿರುವ ಕರ್ಮ ತಿಳಿಯದಂತೆ ಆಡಿಸುತ್ತದೆ. ಆಡಿಸಲ್ಪಟ್ಟ ನಂತರ ಕಾಣಿಸದ ಕರ್ಮವನ್ನು ಕುರಿತು ತಿಳಿದುಕೊಂಡರೆ ಕಾಣಿಸದ ಆತ್ಮವನ್ನು ಕುರಿತು ಸಹ ತಿಳಿಯುತ್ತದೆ.

**ಸೊನ್ನೆ :–** ಆತ್ಮವನ್ನು ತಿಳಿದುಕೊಂಡರೆ ದೇವರನ್ನು ತಿಳಿದುಕೊಂಡಂತೇನಾ?

**ಜಲಂಧರ್ :–** ಆತ್ಮ ದೇವರು ಅಲ್ಲ. ಆತ್ಮ ದೇವರಲ್ಲಿನ ಭಾಗವೆ, ಒಂದು ಭಾಗವನ್ನು ತಿಳಿದುಕೊಂಡಷ್ಟು ಮಾತ್ರಕ್ಕೆ ದೇವರನ್ನು ತಿಳಿದುಕೊಂಡಂತೆ ಅಲ್ಲ.

**ಬೆಣ್ಣೆ :–** ದೇವರು ಕಲ್ಪಿತವಾದಂತೆ ಆತ್ಮ ಸಹ ಕಲ್ಪತವೇ ಎಂದು ನಾವನ್ನುತ್ತೇವೆ. ನೀವೇನನ್ನುತ್ತೀರ?

**ಜಲಂಧರ್ :–** ರಾಮಾಯಣ ಕೇಳಿದ ನಂತರ ಸೀತೆಗೆ ರಾಮ ಏನಾಗುತ್ತಾನೆ ಎನ್ನುವಂತಿದೆ ನಿನ್ನ ಪ್ರಶ್ನೆ. ನಾನು ಏನನ್ನುತ್ತೇನೆಂದರೆ ಆಧಾರವಿಲ್ಲದ ಮಾತುಗಳು ಎಷ್ಟಾದರೂ ಏನಾದರೂ ಮಾತನಾಡಬಹುದು. ಹಾಗೆ ನಿಮ್ಮ ಹೇತುವಾದಿಗಳು ಶಾಸ್ತ್ರಬದ್ಧತೆ ಅಂದುಕೊಂಡು ಎಷ್ಟೋ ಶಾಸ್ತ್ರಬದ್ಧವಲ್ಲದ ಮಾತುಗಳು ಮಾತನಾಡುತ್ತಿದ್ದಾರೆ. ಆತ್ಮ ಎಂದರೆ ಅಡಗಿರುವುದೆಂದು ಅರ್ಥ. ನಿನ್ನಲ್ಲಿ ನನ್ನಲ್ಲಿ ಎಲ್ಲರಲ್ಲಿ ಆತ್ಮ ಅಡಗಿಕೊಂಡಿದೆ. ಬಚ್ಚಿಟ್ಟುಕೊಂಡಿರುವುದನ್ನು ನೋಡದವರು

ಹೇತುವಾದಿಗಳು, ನೋಡಿದವರು ಸಹೇತುವಾದಿಗಳು ಅಂದರೆ ಶಾಸ್ತ್ರಬದ್ಧವಾದ ಕಾರಣ ತಿಳಿದವರು. ಹೇತುವಾದ ಅರ್ಥ ತಿಳಿದುಕೊಂಡವರು ಆತ್ಮ ಇಲ್ಲ ಅನ್ನುತ್ತಿದ್ದಾರೆ. ಹೇತುವಾದವನ್ನು ಪೂರ್ತಿ ತಿಳಿದವರು ಶರೀರದಲ್ಲಿನ ಎಷ್ಟೋ ಕೆಲಸಗಳಿಗೆ ಆತ್ಮ ಕಾರಣವೆಂದು ಆತ್ಮ ಇದೆಯೆಂದು ಒಪ್ಪಿಕೊಳ್ಳುತ್ತಿದ್ದಾರೆ.

**ಬೆಣ್ಣೆ :–** ಆದರೆ ಕೆಲಸ ಮಾಡದಂತೆ ಸ್ತಬ್ದತೆಯಾಗಿರುವ ವೈರಸ್‌ಗು ಸಹ ಆತ್ಮವಿದೆಯಾ?

**ಜಲಂಧರ್ :–** ಚಲಿಸದ ಪದಾರ್ಥದಲ್ಲಿ ಶಕ್ತಿಯಿದೆಯೆಂದು ನೀವೆ ಒಪ್ಪಿಕೊಳ್ಳುತ್ತಿದ್ದೀರ ಶಕ್ತಿಯಲ್ಲಿನ ಭಾಗವೇ ಆತ್ಮ. ಆದ್ದರಿಂದ ಆತ್ಮ ಶಕ್ತಿ ಎಂದು ಹೆಸರು ಸಹ ಇದೆ. ಪದಾರ್ಥದ ಅಣುವಿನಲ್ಲಿಯು ಸಹ ಶಕ್ತಿ ಇದೆ. ಅದು ಅಭೌತಿಕದಲ್ಲಾದರೆ ಆತ್ಮಶಕ್ತಿಯಾಗಿ, ಭೌತಿಕದಲ್ಲಾದರೆ ರಸಾಯನಿಕ ಶಕ್ತಿಯಾಗಿ ತಿಳಿಯುತ್ತಿದೆ. ಆದ್ದರಿಂದ ಪದಾರ್ಥದಲ್ಲಿ ಅಡಗಿ ಅರ್ಥ ಎಂದು ಹೆಸರು ಹೊಂದಿದ ಶಕ್ತಿಯೇ ದೈವ ಎಂದು ಅದು ಭಾಗಿಸಲ್ಪಟ್ಟರೆ ಪರಮಾತ್ಮ, ಆತ್ಮ, ಜೀವಾತ್ಮ ಎಂದು ತಿಳಿದುಬರುತ್ತದೆ.

**ಸೊನ್ನೆ :–** ಪದಾರ್ಥಗಳನ್ನು 105 ಮೂಲಕಗಳಾಗಿ ಇಂದಿನ ಶಾಸ್ತ್ರಜ್ಞರು ಕಂಡುಕೊಂಡಿದ್ದಾರಲ್ಲ ಪೂರ್ವದ ಹಿರಿಯರು ಕಂಡುಕೊಂಡ 108 ಮೂಲಕಗಳ ಹೆಸರುಗಳು ಯಾರಾದರು ಪ್ರಕಟಿಸಿದ್ದಾರಾ?

**ಜಲಂದರ್ :** ಪ್ರಕಟಿಸಿಲ್ಲ.

**ಸೊನ್ನೆ :–** ಹಾಗಿರುವಾಗ 108 ಮೂಲ ಪದಾರ್ಥಗಳಿವೆಯೆಂದು ಪೂರ್ವದಲ್ಲಿ ಹೇಗೆ ಹೇಳಿದ್ದಾರೆ?

**ಜಲಂಧರ್ :–** ಅಂದಿನ ಲೆಕ್ಕ ಬೇರೆ, ಇಂದಿನ ಲೆಕ್ಕ ಬೇರೆ. ಪೂರ್ವದಲ್ಲಿ 108 ಸಂಖ್ಯೆಯಿಂದಲೆ ಆತ್ಮಜ್ಞಾನವನ್ನು ಹೇಳುತ್ತಾ ಬಂದಿದ್ದಾರೆ. ಆ ಸಂಖ್ಯೆ ನಾಲ್ಕು ಭಾಗಗಳಾಗಿ ವಿಭಜಿಸಿ 27 ನಕ್ಷತ್ರಗಳೆಂದು ಹೇಳಿದ್ದಾರೆ. ಅವು ಇಂದಿಗೂ ಜ್ಯೋತಿಷ್ಯಶಾಸ್ತ್ರದಲ್ಲಿ ಇವೆ. ಅದೇ 108 ಸಂಖ್ಯೆಯನ್ನು 12 ಭಾಗಗಳಾಗಿ ವಿಭಜಿಸಿ ಅವುಗಳನ್ನೇ ಗುಣಗಳು ಅಂದಿದ್ದಾರೆ. ಅವು ಈಗ ಕಾಮ, ಕ್ರೋಧ, ಲೋಭ,

ಮೋಹ, ಮಧ, ಮಾತ್ಸರ್ಯಗಳು ಎನ್ನುವ ಆರು ಶತ್ರುಗುಣಗಳಾಗಿ ದಾನ, ದಯೆ, ಔದಾರ್ಯ, ವೈರಾಗ್ಯ, ವಿನಯ, ಪ್ರೇಮ ಎನ್ನುವ ಆರು ಮಿತ್ರ ಗುಣಗಳಾಗಿ ಶರೀರದಲ್ಲಿವೆ. 12 ಗುಣಗಳನ್ನು ಒಂಭತ್ತರಿಂದ ಗುಣಿಸಿ 108 ಉಪಗುಣಗಳು ನಮ್ಮ ಶರೀರದಲ್ಲಿ ಇವೆಯೆಂದಿದ್ದಾರೆ. ಈ ಸಂಖ್ಯೆ ಆಧಾರದಿಂದ ಲೆಕ್ಕಹಾಕಿ 108 ಕೋಟಿ ವರ್ಷಗಳು ಪ್ರಪಂಚ ಆಯಸ್ಸು ಎಂದು ಸಹ ತಿಳಿಸಿದ್ದಾರೆ. ಒಂದೊಂದು ಮೂಲ ಪದಾರ್ಥಕ್ಕೂ ಒಂದೊಂದು ಕೋಟಿ ವರ್ಷಗಳು ಆಯಸ್ಸು ಪ್ರಕಾರ ಪ್ರಪಂಚ ಆಯಸ್ಸು ಒಟ್ಟು 108 ಕೋಟಿ ವರ್ಷಗಳೆಂದು ತಿಳಿಸಿದ್ದಾರೆ.

**ಸೊನ್ನೆ :–** ಪ್ರಪಂಚದಲ್ಲಿನ ಮೂಲ ಪದಾರ್ಥಗಳ ಹೆಸರುಗಳು ಹೇಳಬಲ್ಲಿರಾ?

**ಜಲಂಧರ್ :** 108 ಮೂಲಕಗಳಲ್ಲಿ ಇಂದಿಗೂ ಶಾಸ್ತ್ರಜ್ಞರಿಗೆ ತಿಳಿದಿರುವವು 105 ಮಾತ್ರ ಇಲ್ಲಿಯವರೆಗು ಶಾಸ್ತ್ರಜ್ಞರಿಗೆ ತಿಳಿಯದ ಪದಾರ್ಥಗಳು ವಿಶ್ವದಲ್ಲಿ ಇನ್ನೂ ಮೂರು ಇವೆ. ತಿಳಿದವುಗಳನ್ನು ಮಾತ್ರ ಹೇಳುತ್ತೇವೆ.

**ಬೆಣ್ಣೆ :–** ಮೂರು ಮೂಲಕಗಳು ಏಕೆ ತಿಳಿದಿಲ್ಲ?

**ಜಲಂಧರ್ :–** ಅದು ಶಾಸ್ತ್ರಜ್ಞರನ್ನು ಕೇಳಬೇಕಾದ ಪ್ರಶ್ನೆ. ಕಂಡುಕೊಳ್ಳುವವರಿಗೆ ಇವೆಯೆಂದುಕೊಂಡಿದ್ದಾರೆ. ಮುಂಬರುವ ಕಾಲದಲ್ಲಿ ಯಾವಾಗಲಾದರೂ ವಿಶ್ವದಲ್ಲಿನ ಆ ಮೂರು ಮೂಲಕಗಳನ್ನು ಕಂಡುಕೊಳ್ಳಬಹುದು.

**ಸೊನ್ನೆ :–** ಈಗಿರುವ 105 ಮೂಲಕಗಳನ್ನು ಹೇಳುತ್ತೀರಾ?

**ಜಲಂಧರ್ :** ಕ್ರಮವಾಗಿ

| | | |
|---|---|---|
| 1. ಹೈಡ್ರೋಜನ್ | 2. ಹೀಲಿಯಂ | 3. ಲಿತಿಯಂ |
| 4. ಬೆರೀಲಿಯಂ | 5. ಬೋರಾನ್ | 6. ಕಾರ್ಬನ್ |
| 7. ನೈಟ್ರೋಜನ್ | 8. ಆಕ್ಸಿಜನ್ | 9. ಫ್ಲೋರಿನ್ |
| 10. ನಿಯಾನ್ | 11. ಸೋಡಿಯಂ | 12. ಮೆಗ್ನೀಷಿಯಂ |
| 13. ಅಲ್ಯೂಮಿನಿಯಂ | 14. ಸಿಲಿಕಾನ್ | 15. ಫಾಸ್ಫರಸ್ |

16. ಸಲ್ಫರ್.
17. ಕ್ಲೋರಿನ್
18. ಆರ್ಗಾನ್
19. ಪೊಟಾಷಿಯಂ
20. ಕಾಲ್ಷಿಯಂ
21. ಟಿಟೇನಿಯಂ
22. ಸ್ಕಾಂಡಿಯಂ
23. ವೆನೀಡಿಯಂ
24. ಕ್ರೋಮಿಯಂ
25. ಮೆಂಗನೀಸ್
26. ಬೆರನ್ (ಫೆರ್ರಮ್)
27. ಕೊಬಾಲ್ಟ್
28. ನಿಕೆಲ್
29. ಕಾಫರ್
30. ಜಿಂಕು
31. ಗೇಲಿಯಂ
32.ಜೆರ್ಮೇನಿಯಂ
33. ಆರ್ಸೇನಿಯಂ
34. ವೇಲೀನಿಯಂ
35. ಭ್ರೋಮಿನ್
36. ಕ್ರಿಫ್ಟಾನ್
37. ರುಬೀಡಿಯಂ
38. ಸ್ಟ್ರಾನ್ಷಿಯಂ
39. ಇಟ್ರ್ರಿಯಮ್
40. ಸಿರ್ಕೋನಿಯಂ
41. ನಿಯೊಬಿಯಂ
42. ಮಾಲಿಬ್ಡಿನಮ್
43. ಟೆಕ್ನೀಷಿಯಂ
44. ರುಥೆನಿಯಂ
45. ರೋಡಿಯಂ
46. ಪೆಲ್ಲೇಟಿಯಂ
47. ನಿಕ್ವರ್ (ಬೆಳ್ಳಿ)
48. ಕಾಡ್ಮಿಯಂ
49. ಇಂಡಿಯಂ
50. ಟಿನ್
51. ಆಂಟಿಮೊನಿ
52. ಟೆಲ್ಲೂರಿಯಂ
53. ಅಯೋಡಿನ್
54. ಕ್ಸಿನಾನ್
55. ಸೇಜಿಯಮ್
56. ಬೇರಿಯಂ
57. ಲಾಂಥನಮ್
58. ಸೀರಿಯಂ
59. ರೀಸೋಡಿಯಂ
60. ನಿಯೊಡಿಯಂ
61. ನೋಮಡಿಮಯಂ
62. ಸಾಮಿರಿಯಂ
63. ಈರೋಷಿಯಂ
64. ಕಡೋಲಿನಿಯಂ
65. ಟೆರ್ಬಿಯಂ
66. ಡಿಸ್ಪ್ರಾಜಿಯಂ
67. ಹಾಲಿಯಮಂ
68. ಎರ್ಬಿಯಂ
69. ತುಲಿಯಂ
70. ಇಡ್ಲೇರ್ಷಿಯಂ
71. ಟುಟಿಷಿಯಂ
72. ಹಷೀನಿಯಂ
73. ಟೆನ್ಟಲು
74. ಅಂಗಟಸ್
75. ರೇನೀಯಂ
76. ಅರಟಿಯಂ
77. ಇರಿಡಿಯಂ
78. ಪ್ಲಾಟಿನಂ
79. ಗೋಲ್ಡು
80. ಮೆರ್ಕ್ಯೂರಿ
81. ತೆಲಿಯಂ
82. ಲೆಡ್
83. ಬಿಸ್ಮತ್
84. ಬೆರ್ಲಿಷಿಯಂ
85. ಆಸ್ಟಾಟಿನ್
86. ರೇಡಾನ್
87. ಪ್ರಾನ್ಸಿಯಂ
88. ರೇಡಿಯಂ
89. ಆಕ್ಟೀನಿಯಂ
90. ತೋಲಿಯ್

91. ಪೊಟಾಲಿಟನಿಯಂ 92. ಯುರೇನಿಯಂ 93. ನೆಪ್ಟೋಲಿಯಂ
94. ಪುಟೋನಿಯಂ 95. ಅಮೆರಿಷಿಯಂ 96. ಕ್ಯೂರಿಯಂ
97. ಬೆರ್‌ಗ್ಲೋಯಂ 98. ಕಾಲಿಫೋರ್ನಿಯಂ 99. ಇನ್‌ಸ್ಟೇನಿಯಂ
100. ಬೋಮಿಯಂ 101. ಎಂಡಲೀನಿಯಂ 102. ನೋಪಿಲಿಯಂ
103. ಲಾರ್ಸೆನಿಯಂ 104. ಕುರ್ಬಾಥೋನಿಯಂ 105. ಹಾನಿಯಂ

ಉಳಿದ ಮೂರು ಮೂಲಕಗಳನ್ನು ಇಲ್ಲಿಯವರೆಗು ಕಂಡುಕೊಂಡು ಹೆಸರುಗಳು ಇಡಲಿಲ್ಲ. ಕಂಡುಕೊಳ್ಳದಷ್ಟು ಮಾತ್ರಕ್ಕೆ ಉಳಿದ ಮೂರು ಇಲ್ಲವೆಂದುಕೊಳ್ಳಬಾರದು. ಕೆಲವು ಶಾಸ್ತ್ರಜ್ಞರು ಅಪರೂಪವಾದ ಮೂಲಕ ಪದಾರ್ಥಗಳು ಇನ್ನೂ ಕೆಲವು ಇವೆ ಎಂದಿದ್ದಾರೆ, ಎಷ್ಟು ಆಗಿರುವುದು ಖಚಿತವಾಗಿ ಹೇಳಿದಂತೆ ಇಲ್ಲ. ಯಾವುದು ಏನಾದರೂ ನಮ್ಮ ಲೆಕ್ಕ ಪ್ರಕಾರ 108 ಮೂಲಕಗಳು ಇವೆ.

**ಆಚಾರಿ :–** ನೀವು ಎಷ್ಟು ಹೇಳಿದರು ಮೂಲಕಗಳನ್ನು ಕುರಿತು ಒಪ್ಪಿಕೊಳ್ಳುತ್ತೇವೆ. ಆದರೆ ದೇವರನ್ನು ಕುರಿತು ಒಪ್ಪಿಕೊಳ್ಳುವುದಿಲ್ಲ.

**ಜಲಂಧರ್ :–** ದೇವರನ್ನು ಕುರಿತು ಒಪ್ಪಿಕೊಳ್ಳದೆ ಹೋದರೂ ಪರವಾಗಿಲ್ಲ. ಆದರೆ ನೀನು ಇದ್ದೀಯೆಂದು ನಿನ್ನನ್ನು ಕುರಿತು ನೀನು ಒಪ್ಪಿಕೊಳ್ಳುತ್ತೀಯ ಅಲ್ಲವೆ!

**ಆಚಾರಿ :–** ನಾನು ಇದ್ದೇನೆ, ನಾನು ಆಚಾರಿ ಎಂದು ಒಪ್ಪಿಕೊಳ್ಳುತ್ತೇನೆ.

**ಜಲಂಧರ್ :–** ಆಚಾರಿ ಎನ್ನುವುದು ಹುಟ್ಟಿದ ನಂತರ ಕೆಲವು ದಿನಗಳಿಗೆ ಇಟ್ಟ ಹೆಸರು. ಹೆಸರು ಇಡದ ಮೊದಲು ನೀನು ಯಾರು? ನಿನ್ನ ಗುರುತಿಗೆ ಇಟ್ಟಿರುವುದು ಹೆಸರು, ಹೆಸರನ್ನು ಪಕ್ಕಕ್ಕೆ ಇಟ್ಟರೆ ನೀನು ಯಾರೊ ಹೇಳಬಲ್ಲೆಯ?

**ಆಚಾರಿ :–** ಹೆಸರು ಇಲ್ಲದೆ ಹೋದರೆ ನಾನು ನಾನೇ ಆಗುತ್ತೇನೆ.

**ಜಲಂಧರ್ :–** ಆ ನಾನು ಯಾರು?

**ಆಚಾರಿ :–** ನಾನು ಶರೀರ, ಶರೀರವನ್ನೇ ನಾನು ಅನ್ನುತ್ತಿದ್ದೇನೆ.

**ಜಲಂಧರ್ :** ಶರೀರ ನೀನು ಸತ್ತುಹೋದ ನಂತರವೂ ಸಹ ಇದೆ. ಶರೀರ ಬೇರೆ ನೀನು ಬೇರೆ. ನೀನಿಲ್ಲದ ಶರೀರವನ್ನು ಶವ ಅನ್ನುತ್ತೇವೆ. ಆಗ ಶವ ನಾನು ಆಚಾರಿ ಅನ್ನುವುದಕ್ಕೆ ಅವಕಾಶವಿಲ್ಲ. ಬದುಕಿದ ಶರೀರದಲ್ಲಿ ನೀನು ಒಂದು ಭಾಗವಾಗಿ ಇದ್ದೀಯ. ಆ ಬದುಕಿರುವ ನೀನು ಯಾರು?

**ಆಚಾರಿ :–** ಹೀಗೆ ಕೇಳಿದರೆ ಯಾರೆಂದು ಹೇಳಬೇಕು? ಏನೆಂದು ಹೇಳಬೇಕು?

**ಜಲಂಧರ್ :–** ಕೇಳಿದರೆ ಹೇಳಲಾಗದ್ದನ್ನು ಅಜ್ಞಾನ ಅನ್ನುತ್ತೇವೆ. ಯಾವ ಪ್ರಶ್ನೆಗಾದರೂ ಉತ್ತರ ಹೇಳುವುದೇ ಜ್ಞಾನ. ತಿಳಿಯದತನವೇ ಅಜ್ಞಾನ. ನಿನಗೆ ತಿಳಿಯದ ಜ್ಞಾನ ಇರುವುದರಿಂದ ನೀನು ಉತ್ತರ ಹೇಳಲಾಗದೆ ಹೋಗುತ್ತಿದ್ದೀಯ.

**ಆಚಾರಿ :–** ಈ ಪ್ರಶ್ನೆಗಳಿಗೆ ನೀನು ಉತ್ತರ ಹೇಳುತ್ತೀಯಾ?

**ಜಲಂಧರ್ :** ಹೇಳುತ್ತೇನೆ. ನೀನು ಅನ್ನುವವನೆ ಜೀವಾತ್ಮ. ಜೀವಾತ್ಮನಾದ ನೀನು ಶರೀರದೊಳಗೆ ನಿವಾಸಿಸುತ್ತಿದ್ದೀಯ. ಜೀವಾತ್ಮನಾದ ನಿನಗೆ ಆಕಾರ, ಪರಿಮಾಣ ಇದೆ. ಆಕಾರ ಪರಿಮಾಣ ಇರುವ ನಿನಗೆ ಜೀವಾತ್ಮ ಎಂಬ ಹೆಸರು ಸಹ ಇದೆ. ಹೆಸರು, ಆಕಾರ, ಪರಿಮಾಣ ಇರುವ ನೀನು ನಿನ್ನನ್ನು ಮರೆತುಹೋಗಿ ನಾನು ನಾಸ್ತಿಕನೆಂದು ಅಂದುಕೊಳ್ಳುತ್ತಿದ್ದೀಯ. ನಾಸ್ತಿಕನಾಗಿ ನಿನ್ನನ್ನು ನೀನು ತಿಳಿದುಕೊಳ್ಳದೆ ಇದ್ದೀಯ. ನಿನಗೆ ಕಷ್ಟ ಸುಖ ಅನುಭವಗಳು ಸಹ ಇವೆ. ಕಷ್ಟ ಸುಖ ಅನುಭವಗಳನ್ನು ಅನುಭವಿಸುತ್ತಿರುವ ನೀನು ಚಿಂತಿಸುವುದು ಸಂತೋಷಿಸುವುದು ಸಹ ಮಾಡುತ್ತಿದ್ದೀಯ. ಇಷ್ಟು ವಿಷಯಗಳನ್ನು ತಿಳಿಯದೆ ನಾನು ಆಚಾರಿ ಎಂದುಕೊಳ್ಳುವುದು ತಪ್ಪಲ್ಲವೆ!

**ಆಚಾರಿ :–** ನಾನು ಕಷ್ಟ ಸುಖ ಅನುಭವಗಳನ್ನು ಅನುಭವಿಸುತ್ತೇನೆನ್ನುವುದು ನಿಜ. ಅಷ್ಟು ಮಾತ್ರಕ್ಕೆ ನನಗೆ ಆಕಾರ, ಪರಿಮಾಣ, ಹೆಸರು ಇವೆಯೆನ್ನುವುದು ಈಗಲೂ ನಂಬಲಾಗದಿದ್ದೇನೆ.

**ಜಲಂಧರ್ :** ನಂಬಿಕೆ ಬಿಟ್ಟು ಹೇಳಿರುವವೆಲ್ಲ ಅನುಭವಕ್ಕೆ ತಂದುಕೊ. ಅನುಭವಕ್ಕೆ ತಂದುಕೊಳ್ಳುವುದಕ್ಕೆ ಜ್ಞಾನ ಅವಶ್ಯಕ. ಜ್ಞಾನ ತಿಳಿದ ನಂತರ ನೀನೇ ನಿನ್ನನ್ನು ಕುರಿತು ಉತ್ತರ ಹೇಳುವಷ್ಟು ಮಟ್ಟಿಗೆ ಬರುತ್ತೀಯ.

**ಆಚಾರಿ :–** ಆದರೆ ನಾನೀಗ ಏನು ಮಾಡಬೇಕು?

**ಜಲಂಧರ್ :–** ನಾನು ನಾಸ್ತಿಕನು, ದೇವರ ಜ್ಞಾನವನ್ನು ಕೇಳಬಾರದು ಅನ್ನುವುದನ್ನು ಬಿಟ್ಟುಹಾಕಿ, ದೇವರು ಇಲ್ಲ ಎನ್ನುವ ಹದ್ದನ್ನು ಬಿಟ್ಟುಹಾಕಿ, ನನಗೆ ತಿಳಿಯದಿರುವುದು ಎಷ್ಟೋ ಇದೆಯೆಂದು, ತಿಳಿಯದಿರುವುದನ್ನು ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸು. ಆಗ ಎಲ್ಲವು ಅರ್ಥವಾಗುತ್ತದೆ, ಅನುಭವಕ್ಕೆ ಬರುತ್ತದೆ. ಆಗ ನೀನು ಮೊದಲು ಎಷ್ಟು ಅಜ್ಞಾನದಲ್ಲಿದ್ದೀಯೊ ಎಷ್ಟು ಜ್ಞಾನದೊಳಗೆ ಬಂದಿದ್ದೀಯೊ ನಿನಗೆ ಅರ್ಥವಾಗುತ್ತದೆ.

**ಬೆಣ್ಣೆ :–** ನಮ್ಮ ಅಣ್ಣಂದಿರ ಹಾಗೆ ದೇವತಾ ಪೂಜೆ ಮಾಡಬೇಕಾಗಿರುತ್ತದಾ?

**ಜಲಂಧರ್ :–** ದೇವತಾ ಪೂಜೆ ಒಳ್ಳೆಯದಲ್ಲವೆಂದು ಮೊದಲೆ ನಿಮ್ಮ ಅಣ್ಣಂದಿರಿಗೆ ಹೇಳಿದ್ದೇನಲ್ಲವೆ!

**ಸಕ್ಕರೆ :** ನಾವು ಈಗಿನಿಂದ ಚಿಲ್ಲರೆ ದೇವತೆಗಳನ್ನು ಬಿಟ್ಟು ಅಸಲಾದ ಪರಮಾತ್ಮ ಜ್ಞಾನ ತಿಳಿದುಕೊಳ್ಳುತ್ತೇವೆ.

**ಸೊನ್ನೆ :** ನಾವೂ ಸಹ ಈಗಿನಿಂದ ಉತ್ತರವಿಲ್ಲದ ಹೇತುವಾದ, ನಾಸ್ತಿಕವಾದ ಬಿಟ್ಟು ಅಸಲಾದ ಉತ್ತರ ವಾದವಾದ ಪರಮಾತ್ಮನ ಜ್ಞಾನವನ್ನೇ ತಿಳಿದು ಕೊಳ್ಳುತ್ತೇವೆ.

ಹೀಗೆ ಮನೆಯವರೆಲ್ಲರೂ ಜಲಂಧರ್ ಮಾತುಗಳಿಗೆ ಒಂದು ಉದ್ದೇಶದೊಳಗೆ ಬಂದು ಇಲ್ಲಿಯವರೆಗು ಅವರಿಗಿದ್ದ ಆಸ್ತಿಕವಾದ, ನಾಸ್ತಿಕವಾದ ಸರಿಯಾದವುಗಳಲ್ಲವೆಂದು ಈಗಿನಿಂದ ಅಸಲಾದ ದೈವಮಾರ್ಗವನ್ನು ಶಾಸ್ತ್ರಬದ್ಧವಾಗಿ ಅನುಸರಿಸಬೇಕೆಂದುಕೊಂಡರು. ಆ ಕುಟುಂಬದಲ್ಲಿ ಎರಡು ಗುಂಪುಗಳಾಗಿದ್ದ ಆರು ಜನ ಒಂದು ಗುಂಪಾಗಿ ತಯಾರಾಗಿ ದೈವ ಅನ್ವೇಷಣೆ ಯಲ್ಲಿ ತೊಡಗಿದ್ದಾರೆ. ತಮ್ಮಲ್ಲಿನ ಸಂಶಯಗಳನ್ನು ತೀರಿಸಿ ದೈವಜ್ಞಾನದಕಡೆಗೆ ಮರಳಿಸಿದ್ದಕ್ಕೆ ಜಲಂಧರ್‌ಗೆ ಕೃತಜ್ಞತೆಗಳನ್ನು ತಿಳಿಸಿಕೊಂಡರು.

# ಆದ್ರೆ ಒಂದು ಮೇಲು, ಆಗದೇ ಹೋದರೆ ಎರಡು ಮೇಲು

ಅನೇಕ ವರ್ಷಗಳ ಪೂರ್ವದಲ್ಲಿ ಶಂಖುದತ್ತ ಎಂಬ ಒಬ್ಬ ಯೋಗಿ ಕಾಡಿನಲ್ಲಿ ವಾಸಮಾಡುತ್ತಿದ್ದನು. ಆತನು ಯುಕ್ತವಯಸ್ಸಿನಲ್ಲಿಯೆ ಕಾಡಿನಲ್ಲಿ ಸೇರಿ ಹೋಗಿರುವುದರಿಂದ ಪ್ರಪಂಚ ವಿಷಯಗಳ ಅವಗಾಹನೆ ಬಹಳ ಕಡಿಮೆಯಾಗಿತ್ತು. ಆತನಿಗೆ ಕಾಡಿನಲ್ಲಿ ಕ್ರೂರ ಜಂತುಗಳು ಸಹಿತ ಅಭ್ಯಾಸ ವಾಗಿರುವುದರಿಂದ ಆತನ ಕಾಲವೆಲ್ಲ ಯಾವ ವಿಧದ ಕಷ್ಟಗಳು ಇಲ್ಲದೆ ನಡೆದು ಹೋಗುತ್ತಿತ್ತು. ಒಂದು ದಿನ ಆ ದೇಶದ ರಾಜ ಬೇಟೆಗಾಗಿ ಕಾಡಿಗೆ ಬಂದು ಹುಲಿಯನ್ನು ಅಟ್ಟಿಸಿಕೊಂಡು ಬಂದನು. ಹುಲಿ ರಾಜನಿಂದ ತಪ್ಪಿಸಿಕೊಳ್ಳು ವುದಕ್ಕಾಗಿ ಓಡುತ್ತಾ ಶಂಖುದತ್ತನ ಬಳಿಗೆ ಬಂದಿತು. ಶಂಖುದತ್ತನು ಅದನ್ನು ನೋಡಿ ಅದಕ್ಕೆ ಭಯ ತೀರುವಂತೆ ಹತ್ತಿರ ಸೇರಿಸಿಕೊಂಡು ತಲೆಯಮೇಲೆ ಸವರುತ್ತಿದ್ದನು. ಹುಲಿ ಚಿಕ್ಕಂದಿನಿಂದ ಶಂಖುದತ್ತನ ಬಳಿಯೆ ಬೆಳೆದಿರುವುದರಿಂದ ಅಪಾಯಸ್ಥಿತಿಯಲ್ಲಿ ಅದು ಅಲ್ಲಿಗೆ ಸೇರಿತು. ಸ್ವಲ್ಪಹೊತ್ತಿಗೆ ಅಟ್ಟಿಸಿಕೊಂಡು ಬಂದ ರಾಜನು ಸಹ ಅಲ್ಲಿಗೆ ಸೇರಿದನು. ಹುಲಿ ಶಂಖುದತ್ತನ ಬಳಿ ಇರುವುದನ್ನು ನೋಡಿ ಆಶ್ಚರ್ಯ ಪಟ್ಟನು. ಹುಲಿಯು ಸಹ ರಾಜನನ್ನು ನೋಡಿ ಗರ್ಜಿಸಿತು. ಪರಿಸ್ಥಿತಿ ಗಮನಿಸಿದ ಶಂಖುದತ್ತ ಹುಲಿಯನ್ನು ಸಂತೈಸಿ ರಾಜನಕಡೆ ತಿರುಗಿ ಹೀಗೆ ಅಂದನು.

**ಶಂಖುದತ್ತ :–** ನೀವ್ಯಾರು? ಹುಲಿಯನ್ನು ಏಕೆ ಸಾಯಿಸಬೇಕೆಂದುಕೊಂಡಿದ್ದೀರ?

**ರಾಜ :–** ನನ್ನ ಹೆಸರು ಸುವರ್ಣಮಹಾರಾಜ, ನಾನು ಸುವರ್ಣ ರಾಜ್ಯಕ್ಕೆ ರಾಜ, ಬೇಟೆಯಾಡುವುದು ನನ್ನ ಹವ್ಯಾಸ ಆದ್ದರಿಂದಲೆ ಈ ಹುಲಿಯನ್ನು ಬೇಟೆಯಾಡುತ್ತಿದ್ದೇನೆ.

**ಶಂಖುದತ್ತ :–** ನೀನು ರಾಜನೇ ಆಗಿರಬಹುದು, ರಾಜ್ಯಕ್ಕೆ ಅಧಿಪತಿಯೇ ಆಗಿರಬಹುದು, ಆದಷ್ಟು ಮಾತ್ರಕ್ಕೆ ಪ್ರಾಣಿಗಳನ್ನು ಬೇಟೆಮಾಡುವುದು ತಕ್ಕ ಕೆಲಸವಲ್ಲ, ಈ ಹುಲಿ ನಿನಗೇನು ಅಪಕಾರ ಮಾಡಿದೆ?

**ರಾಜ :–** ಹೇಳಿದ್ದೇನಲ್ಲ ಬೇಟೆ ನನ್ನ ಹವ್ಯಾಸವೆಂದು.

**ಶಂಖುದತ್ತ :–** ಬೇಟೆ ಅಂದರೆ ಜಂತುಗಳನ್ನು ಹಿಂಸಿಸಿ ಸಾಯಿಸುವುದಾ? ಇದನ್ನು ಬೇಟೆ ಅನ್ನುವುದಿಲ್ಲ ಹಿಂಸೆ ಅನ್ನುತ್ತಾರೆ. ಆತ್ಮವನ್ನು ಹತ್ಯೆ ಮಾಡುವುದೆನ್ನುತ್ತಾರೆ. ಅದರಿಂದ ನಿನಗೆ ಭಯಂಕರ ಪಾಪಬರುತ್ತದೆ.

**ರಾಜ :–** ಏನು ನನ್ನ ಚರ್ಯವನ್ನೇ ತಪ್ಪು ಹಿಡಿಯುವುದೆ! ಕ್ರೂರ ಜಂತುವನ್ನು ಸಾಯಿಸುವುದು ಆತ್ಮ ಹತ್ಯೆಯಾಗುತ್ತದಾ! ಇಷ್ಟಕ್ಕು ನೀನ್ಯಾರು? ನನಗೆ ನೀತಿಗಳನ್ನು ಹೇಳುತ್ತಿದ್ದೀಯ.

**ಶಂಖುದತ್ತು :–** ತಪ್ಪು ಸಾಮಾನ್ಯನಿಗಾದರೂ ರಾಜನಿಗಾದರೂ ಸಮಾನವೇ. ನೀನೆಷ್ಟು ರಾಜನಾದರೂ ಸ್ವಲ್ಪವಾದರೂ ಆತ್ಮಜ್ಞಾನ ಇಲ್ಲದವನು. ಆದ್ದರಿಂದಲೆ ನಾನು ಜ್ಞಾನ ಹೇಳಿದರೆ ನೀನು ನೀತಿಗಳು ಅನ್ನುತ್ತಿದ್ದೀಯ. ನೀತಿಗೆ ಜ್ಞಾನಕ್ಕೆ ವ್ಯತ್ಯಾಸ ಸಹ ತಿಳಿಯದವನು ನೀನು ರಾಜ್ಯಕ್ಕೆ ರಾಜನಾ?

ಆ ಮಾತುಗಳು ಕೇಳಿದ ರಾಜ ಒಂದು ಬಾರಿ ಆಶ್ಚರ್ಯ ಪಟ್ಟನು. ಯಾವ ಭಯವಿಲ್ಲದೆ ರಾಜನಾದ ತನಗೇ ಬುದ್ಧಿಮಾತು ಹೇಳಿದವನು ಸಾಮಾನ್ಯನಲ್ಲವೆಂದು ಗ್ರಹಿಸಿ, ಆತನಲ್ಲೇನೋ ದೊಡ್ಡತನವಿದೆಯೆಂದು ತಿಳಿದವನಾಗಿ ವಿನಯದಿಂದ ಹೀಗೆ ಅಂದನು.

**ರಾಜ :–** ತಾವ್ಯಾರೊ ದೊಡ್ಡವರಂತಿದ್ದೀರ. ನನ್ನದೇನಾದರೂ ತಪ್ಪಿದ್ದರೆ ಮನ್ನಿಸಬೇಕೆಂದು ಕೋರುತ್ತಿದ್ದೇನೆ. ಇಷ್ಟಕ್ಕು ನೀವ್ಯಾರು? ನೀವು ಇಲ್ಲೇಕೆ ಇದ್ದೀರ ದಯೆಮಾಡಿ ತಿಳಿಸಿರಿ.

**ಶಂಖುದತ್ತ :–** ನನ್ನ ಹೆಸರು ಶಂಖುದತ್ತ. ನನಗೆ ಚಿಕ್ಕ ವಯಸ್ಸಿನಲ್ಲಿಯೆ ತಾಯಿ ತಂದೆಯರು ಸತ್ತುಹೋದರು. ಬೇರೆ ಯಾರೊ ನನ್ನನ್ನು ದತ್ತು ತೆಗೆದುಕೊಂಡು ದೊಡ್ಡವನನ್ನು ಮಾಡಿದ್ದಾರೆ. ದತ್ತು ಕುಮಾರನೆಂದು ಶಂಖುದತ್ತು ಎಂದು ಹೆಸರು ಇಟ್ಟಿದ್ದಾರೆ. ನನಗೆ ಯುಕ್ತವಯಸ್ಸು ಬರುತ್ತಲೆ ನನ್ನ ತಲೆಯಲ್ಲಿ

ಅನೇಕ ಊಹೆಗಳು ಬರತೊಡಗಿದವು. ಪ್ರಪಂಚ ವಿಷಯಗಳು ಸರ್ವ ಸಾಧಾರಣವೆಂದು ಪರಮಾತ್ಮನ ವಿಷಯಗಳೇ ಅಸಾಧಾರಣವೆಂದು ಗ್ರಹಿಸಿದ ನಾನು ಪ್ರಪಂಚ ವಿಷಯಗಳ ಮೇಲೆ ಆಸಕ್ತಿಯನ್ನು ಸ್ಥಗಿತ ಮಾಡಿಕೊಂಡು ಪರಮಾತ್ಮ ವಿಷಯಗಳ ಅವಗಾಹನೆಗಾಗಿ ಕಾಡಿನ ಮಧ್ಯಕ್ಕೆ ಬಂದೆನು. ಆಗಿನಿಂದ ಕ್ರೂರಜಂತುಗಳನ್ನು ಸಹಿತ ಆದರಣೆಯಿಂದ ನೋಡುತ್ತಾ ಎಲ್ಲವುಗಳಲ್ಲಿರುವ ಆತ್ಮ ಹೇಗೆ ಇದೆಯೆಂದು ಆತ್ಮ ವಿಷಯಗಳನ್ನೇ ಪರಿಶೋಧಿಸುತ್ತಿದ್ದೇನೆ. ಮೋಕ್ಷ ಹೊಂದಬೇಕೆಂದುಕೊಳ್ಳುತ್ತಿದ್ದೇನೆ.

**ರಾಜ :–** ನೀವು ಕೋರಿದಂತೆ ನಿಮ್ಮ ಆಶಯ ನೆರವೇರಿದರೆ ಪರವಾಗಿಲ್ಲ. ಒಂದು ವೇಳೆ ನೀವು ಮೋಕ್ಷ ಹೊಂದದೆ ಹೋದರೆ ನಿಮ್ಮ ಶ್ರಮವೆಲ್ಲ ನಿರರ್ಥಕವೆ ಅಲ್ಲವೆ! ನಿಮಗೇನು ಮೇಲು.

**ಶಂಖುದತ್ತ :–** ಆದ್ರೆ ಒಂದು ಮೇಲು, ಆಗದೇ ಹೋದರೆ ಎರಡು ಮೇಲು.

ಆ ಮಾತು ಕೇಳಿದ ರಾಜರಿಗೆ ಏನೂ ಅರ್ಥವಾಗಲಿಲ್ಲ. ಮೋಕ್ಷ ಬಂದರೆ ಒಂದು ಮೇಲೇನು, ಅದು ಬಾರದೆ ಹೋದರೆ ಎರಡು ಮೇಲೇನೆಂದು ಅರ್ಥವಾಗದ ಸ್ಥಿತಿಯಲ್ಲಿ ಶಂಖುದತ್ತನ ಕಡೆ ನೋಡಿದನು. ರಾಜರಿಗೆ ತನ್ನ ಮಾತು ಅರ್ಥವಾಗಿಲ್ಲವೆಂದು ಗ್ರಹಿಸಿದ ಶಂಖುದತ್ತು ನಗುತ್ತಾ ಹೀಗೆ ಅಂದನು. ನೀನೆಷ್ಟು ರಾಜನಾದರೂ ನಿನಗೆ ಅರ್ಥವಾಗದ ವಿಷಯಗಳು ಬಹಳ ಇವೆ. ಈಗ ಹುಲಿಯನ್ನು ಸಾಯಿಸುವುದು ಆತ್ಮಹತ್ಯೆ ಎಂದಿದ್ದೇನೆ. ಅದು ಆತ್ಮಹತ್ಯೆ ಹೇಗೆ ಆಗುತ್ತದೆಂದು ನಿನಗೆ ಸಂಶಯ ಬಂದಿದೆ. ಅದೂ ಅರ್ಥ ಆಗಲಿಲ್ಲ. ನೀನು ಒಬ್ಬ ದೇವರನ್ನು ಆರಾಧಿಸುತ್ತಿದ್ದೀಯ. ನೀನು ಆರಾಧಿಸುತ್ತಿರುವುದು ದೇವರನ್ನಲ್ಲ ದೆವ್ವವನ್ನು ಎಂದು ನಾನಂದರೆ ಅಸಲಿಗೆ ನಿನಗೇನು ಅರ್ಥವಾಗಲ್ಲ. ಅರವತ್ತುನಾಲ್ಕು ವಿದ್ಯೆಗಳು ಕಲಿತ ನಿನಗೆ ಇದು ಯಾವ ವಿದ್ಯೆಯೊ ಸಹ ಅರ್ಥವಾಗುವುದಿಲ್ಲ. ಈಗ ನಿನಗೇನು ಹೇಳಿದರು ಎಲ್ಲಾ ವಿಚಿತ್ರವಾಗಿ ಕಾಣಿಸುತ್ತವೆ. ನಾನು ಹೇಳಿದರು ನೀನು ಗ್ರಹಿಸಿಕೊಳ್ಳುವ ಸ್ಥಿತಿಗೆ ಬರಬೇಕೆಂದರೆ ನಿನ್ನ ಮೆದುಳು

ಸ್ವಲ್ಪ ಪರಿಪಕ್ವತೆ ಆಗಬೇಕು. ಹಾಗೆ ಪರಿಪಕ್ವತೆ ಆಗಬೇಕೆಂದರೆ ನೀನು ಸ್ವಲ್ಪ ಕಾಲ ತಿಳಿಯದವುಗಳನ್ನು ತಿಳಿದುಕೊಳ್ಳಬೇಕೆಂಬ ತಪನೆಯಲ್ಲಿರಬೇಕು. ಆಗ ಶಾಸ್ತ್ರಬದ್ಧವಾದ, ಹೇತು ಬದ್ಧವಾದ ವಿಷಯಗಳನ್ನು ಗ್ರಹಿಸಿಕೊಳ್ಳುವ ಸ್ಥಿತಿಗೆ ನೀನು ಸೇರಿಕೊಳ್ಳುತ್ತೀಯ.

ಆ ಮಾತುಗಳನ್ನು ಕೇಳಿದ ಸುವರ್ಣ ಮಹಾರಾಜ ತನಗೆಷ್ಟೋ ತಿಳಿಯದಿರುವುದು ಇದೆಯೆಂದು ಗ್ರಹಿಸಿದವನಾಗಿ ಸರ್ವವೂ ತಿಳಿಯಬೇಕೆಂದು ಶಂಖುದತ್ತನನ್ನು ಹೀಗೆ ಕೇಳಿದನು.

**ರಾಜ :–** ನೀವು ಮಹಾಪುರುಷರು. ಇಲ್ಲಿ ನಿಮ್ಮ ಮುಖಾಂತರ ನನಗೆ ಸ್ವಲ್ಪ ಜ್ಞಾನೋದಯವಾಯಿತು. ನನಗೆ ಎಷ್ಟೋ ತಿಳಿಯದ ವಿಷಯಗಳು ಇವೆ. ಆದ್ದರಿಂದ ನಿಮ್ಮನ್ನು ಗುರುವಾಗಿ ಭಾವಿಸಿ ನಿಮ್ಮ ಮುಖಾಂತರ ದೈವಜ್ಞಾನವನ್ನು ತಿಳಿದುಕೊಳ್ಳಬೇಕೆಂದುಕೊಂಡಿದ್ದೇನೆ. ನನ್ನ ಮೇಲೆ ದಯೆ ತೋರಿ ನನ್ನನ್ನು ನಿಮ್ಮ ಶಿಷ್ಯನಾಗಿ ಸ್ವೀಕರಿಸಬೇಕೆಂದು ಪ್ರಾರ್ಥಿಸುತ್ತಿದ್ದೇನೆ.

**ಶಂಖುದತ್ತ :–** ನಿನ್ನ ಉದ್ದೇಶ ಒಳ್ಳೆಯದೆ. ನನ್ನ ಶಿಷ್ಯನಾಗಿ ನಿನ್ನನ್ನು ಸೇರಿಸಿಕೊಳ್ಳುವುದರಲ್ಲಿ ತಪ್ಪಿಲ್ಲ. ನನಗಿಷ್ಟಬಂದಾಗ ನಾನೇ ನಿನ್ನ ಬಳಿಗೆ ಬರುತ್ತೇನೆ. ಆಗ ಸಂಪೂರ್ಣ ಬೋಧನೆ ನಿನಗೆ ಲಭಿಸುತ್ತದೆ. ಅಲ್ಲಿಯವರೆಗು ಇದೇ ಛಲದಿಂದ ಇರು. ಆದ್ರೆ ಒಂದು ಲಾಭ, ಆಗದೇ ಹೋದರೆ ಎರಡು ಲಾಭ, ಇನ್ನು ಮನೆಗೆ ಹೋಗು ಎಂದನು.

ಶಂಖುದತ್ತ ಮಾತುಗಳ ಸಂದರ್ಭದಲ್ಲಿ ಒಂದು ಬಾರಿ ಆದ್ರೆ ಒಂದು ಮೇಲು, ಆಗದೇ ಹೋದರೆ ಎರಡು ಮೇಲು ಅಂದಿದ್ದನು. ಈಗೇನೊ ಆದ್ರೆ ಒಂದು ಲಾಭ, ಆಗದೇ ಹೋದರೆ ಎರಡು ಲಾಭ ಎಂದಿದ್ದಾನೆ. ಆದ್ರೆ ಒಂದು, ಆಗದೇ ಹೋದರೆ ಎರಡು ಅನ್ನುವುದರೊಳಗಿನ ಅಂತರಾರ್ಥ ಈಗ ನಮಗಾಗಲಿ ಆಗ ಆ ರಾಜನಿಗಾಗಲಿ ಅರ್ಥವಾಗಲಿಲ್ಲ. ಶಂಖುದತ್ತ ಗುರುಗಳು ತನಗಿಷ್ಟ ಬಂದಾಗ ತಾನೇ ಹೇಳುತ್ತೇನೆಂದಿದ್ದಾನಲ್ಲ ಕಾದು ನೋಡೋಣ.

ಸ್ವಲ್ಪ ಕಾಲ ಕಳೆದ ನಂತರ ಶಂಖುದತ್ತನು ಕಾಡು ಬಿಟ್ಟು ಸುವರ್ಣ ರಾಜ್ಯದ ಕಡೆಗೆ ಹೊರಟನು. ಸುವರ್ಣ ರಾಜ್ಯದಲ್ಲಿ ಎಲ್ಲ ಮತದವರು ಇದ್ದರು. ಮೊದಲು ಒಂದು ಪಟ್ಟಣವನ್ನು ಸೇರಿದ ಶಂಖುದತ್ತನಿಗೆ ಆ ಪಟ್ಟಣದಲ್ಲಿ ಒಬ್ಬ ಕ್ರೈಸ್ತ ವ್ಯಕ್ತಿ ಮತ್ತೊಬ್ಬ ಮುಸ್ಲಿಮ್ ವ್ಯಕ್ತಿಯೊಂದಿಗೆ ತಗಾದೆ ಮಾಡುತ್ತಿರುವುದು ಕಾಣಿಸಿತು. ಅವರ ತಗಾದೆ ಏನೆಂದು ನೋಡಿದಾಗ ಅವರಿಬ್ಬರು ನನ್ನ ಮತ ದೊಡ್ಡದು ನನ್ನ ದೇವರು ದೊಡ್ಡವನೆಂದು ವಾದಿಸುತ್ತಿದ್ದರು. ಅಲ್ಲಿದ್ದ ಉಳಿದವರು ಅನೇಕ ಜನ ಕೋಳಿ ಪಂದ್ಯವಾಟವನ್ನು ನೋಡುವಂತೆ ನೋಡುತ್ತಿದ್ದಾರಾಗಲಿ ಅವರುಯಾರ ವಾದವನ್ನು ಸಮರ್ಥಿಸುವಂತಿಲ್ಲ. ಅಲ್ಲಿಗೆ ಸೇರಿದ ಶಂಖುದತ್ತ ಅವರ ವಾದದ ಸಾರಾಂಶವೇನೋ ನೋಡಬೇಕೆಂದುಕೊಂಡನು. ಬಿಡುವಿಲ್ಲದೆ ಅವರ ವಾದವನ್ನು ನೋಡಿ ಅವರೊಂದಿಗೆ ಹೀಗೆ ಮಾತನಾಡತೊಡಗಿದನು.

**ಶಂಖುದತ್ತ :–** ಅಯ್ಯಾ ಬಾಷಾರವರೆ ನಿಮ್ಮ ಮುಖ್ಯ ಉದ್ದೇಶ ತಿಳಿಸಿರಿ.

**ಬಾಷಾ :–** ಅಲ್ಲಾ ಹೊರತು ಉಳಿದ ಬೇರೆ ದೇವರೇ ಇಲ್ಲವೆಂದು ನಾನನ್ನುತ್ತಿದ್ದೇನೆ. ಅದಕ್ಕೆ ಈತನು ಯೆಹೋವಾನನ್ನು ಮೀರಿಸಿದ ದೇವರಿಲ್ಲವೆಂದು ಅನ್ನುತ್ತಿದ್ದಾನೆ. ನಮ್ಮ ಪವಿತ್ರ ಗ್ರಂಥದಲ್ಲಿ ಖುರಾನ್‌ನ್ನು ಮೀರಿದ ಬೋಧನೆಗಳಾಗಲಿ, ಅಲ್ಲಾಹ್‌ನ್ನು ಮೀರಿದ ದೇವರಾಗಲಿ ಇಲ್ಲವೆಂದು ಹೇಳಲಾಗಿದೆ. ಅದನ್ನಲ್ಲದೆ ನಾವು ಬೇರೆ ದೇವರನ್ನು ಒಪ್ಪಿಕೊಳ್ಳುವುದಿಲ್ಲ. ಈತನು ನನ್ನನ್ನು ಒಪ್ಪಿಸಬೇಕೆಂದು ನೋಡುತ್ತಿದ್ದಾನೆ.

ತಕ್ಷಣವೇ ಜಾನ್‌ರವರು ಹೀಗೆ ಅಂದರು.

**ಜಾನ್ :–** ನಿಮ್ಮದು ಪವಿತ್ರ ಗ್ರಂಥವಾದರೆ ನಮ್ಮದು ಪರಿಶುದ್ಧಗ್ರಂಥ. ನಮ್ಮ ಗ್ರಂಥದಲ್ಲಿ ಪ್ರಪಂಚವೆಲ್ಲದಕ್ಕು ಯೆಹೋವಾನೆ ದೇವರೆಂದು ಹೇಳಲ್ಪಟ್ಟಿದೆ. ನಿಮ್ಮ ಗ್ರಂಥಕ್ಕಿಂತ ನಮ್ಮ ಗ್ರಂಥ ಮೊದಲೆ ಬರೆಯಲಾಗಿದೆ. ಇದಕ್ಕೆ ನೀವೇನನ್ನುತ್ತೀರ ಹೇಳಿರಿ ಎಂದು ಶಂಖುದತ್ತನನ್ನು ಕೇಳಿದನು.

ಶಂಖುದತ್ತನು ಬಾಯಿ ಬಿಡದ ಮೊದಲೆ ಪಕ್ಕದಲ್ಲೇ ಇದ್ದ ಹಿಂದೂ ವೈಶ್ಯನು ಜೋಕ್ಯ ಮಾಡಿಕೊಂಡು ನಿಮ್ಮ ಖುರಾನ್‌ಗಿಂತ, ಬೈಬಿಲ್‌ಗಿಂತ, ನಿಮ್ಮ ಎರಡು ಮತಗಳಿಗಿಂತ ಎಷ್ಟೋ ಮೊದಲು ನಮ್ಮ ಹಿಂದೂಮತ ಹುಟ್ಟಿದೆ. ವಿಷ್ಣುವನ್ನು ಮೀರಿದ ದೇವರ್ಯಾರೂ ಇಲ್ಲ. ನೀವು ನಮ್ಮ ದೇವರು ದೊಡ್ಡವನು, ನಮ್ಮ ಗ್ರಂಥ ದೊಡ್ಡದೆಂದು ಅಂದುಕೊಂಡರು ಏನೂ ಪ್ರಯೋಜನವಿಲ್ಲ. ಎಲ್ಲರಿಗಿಂತ ಹಿಂದೂ ಮತ ಅದರಲ್ಲಿ ವಿಷ್ಣು ದೊಡ್ಡವನು. ಈ ವಿಷಯವನ್ನು ಎಷ್ಟೋ ಪುರಾಣಗಳು ಉದ್ಘೋದಿಸಿವೆ ಅಂದನು. ಮೂರು ಮತದವರು ಹೇಳಿದ ಮಾತುಗಳನ್ನು ಕೇಳಿದ ಶಂಖುದತ್ತ ಹೀಗೆ ಅನ್ನಲಾರಂಭಿಸಿದನು.

**ಶಂಖುದತ್ತ :–** ನೀವು ಮೂವರು ಮೂರು ವಿಧಗಳ ದೇವತೆಗಳನ್ನು ಪ್ರಸ್ತಾಪಿಸಿ ನಮ್ಮ ದೇವರು ದೊಡ್ಡವನು, ನಮ್ಮ ದೇವರು ದೊಡ್ಡವನೆಂದು ಹೇಳುವುದು ನಡೆದಿದೆ. ನಿಜಕ್ಕೆ ಯಾವ ದೇವರು ದೊಡ್ಡವನೊ ತಿಳಿದುಕೊಳ್ಳಬೇಕಾದ ಅವಶ್ಯಕತೆ ಪ್ರಜೆಗಳೆಲ್ಲರಿಗೂ ಇದೆ. ಹಾಗೆ ವಿವರ ತಿಳಿಯದಿರುವಾಗ ಆ ತಿಳಿಯದ ತನದಿಂದ ಅವರವರು ಅನುಸರಿಸುತ್ತಿರುವ ಮಾರ್ಗಗಳನ್ನು ಅನುಸರಿಸಿ ಇತರರ ಮೇಲೆ ಇತರ ಮತಗಳ ಮೇಲೆ ದ್ವೇಷವನ್ನು ಬೆಳೆಸಿಕೊಳ್ಳುವುದು ನಡೆಯುತ್ತಿದೆ. ಆದ್ದರಿಂದ ಒಂದು ಮತದವರು ಮತ್ತೊಂದು ಮತವನ್ನು ಇಲ್ಲದಂತೆ ಮಾಡಬೇಕೆಂದು ಕೊಳ್ಳುತ್ತಾರೆ. ಇತರ ಮತದವರೆಲ್ಲ ಅವರ ದೇವರಿಗೇ ವಿರುದ್ಧವಾದವರೆಂದು ಭಾವಿಸುತ್ತಾರೆ. ತಾವೇ ನಿಜವಾದ ಭಕ್ತರೆಂದುಕೊಂಡು ತಮ್ಮ ದೇವರಿಗೆ ವಿರುದ್ಧವಾದವರನ್ನು ಇಲ್ಲದಂತೆ ಮಾಡುವುದೇ ನಿಜವಾದ ಭಕ್ತಿ ಅಂದುಕೊಳ್ಳುವುದರಿಂದ ಮನುಷ್ಯರಲ್ಲಿ ಹಿಂಸೆ ಹೆಚ್ಚಾಗುತ್ತಿದೆ. ದೇವರೆಂದರೆ ಯಾರೆಂದು ತಿಳಿಯದೆ, ಯಾವ ಮತಕ್ಕೆ ಆ ಮತದವರು ತಮ್ಮ ದೇವರೇ ದೊಡ್ಡವನೆಂದುಕೊಳ್ಳುವುದರಿಂದ, ಇತರ ಮತದವರನ್ನು ದೇವರ ವಿರೋಧಿಗಳೆಂದು ಲೆಕ್ಕಿಸಿಕೊಳ್ಳುವುದರಿಂದ, ಮತಮೌಢ್ಯ ಬೆಳೆದು ಹೋಗುತ್ತಿದೆ. ಯಾರದು ನಿಜವಾದ ಭಕ್ತಿಯೊ ಯಾರು ನಿಜವಾದ ದೇವರೊ ತಿಳಿಯಬೇಕೆಂದರೆ ಮೊದಲು ನಾನು ಹೇಳುವ ಒಂದು ವಿಷಯವನ್ನು ಆಲೋಚಿಸಿ ನೋಡಿರಿ.

ನಂತರ ಯಾರ ದೇವರು ನಿಜವಾದವನೊ ನೀವೆಲ್ಲರೂ ಒಪ್ಪಿಕೊಳ್ಳಬಹುದು. ಇಲ್ಲಿಯವರೆಗು ಎಷ್ಟೋ ಸ್ವಾಮೀಜಿಗಳಿಗೆ ಗುರುಗಳಿಗೆ ಮತ ಹಿರಿಯರಿಗೆ ತಿಳಿಯದ ವಿಷಯವನ್ನು ಒಂದು ಷರತ್ತಿನ ಮೇಲೆ ತಿಳಿದುಕೊಳ್ಳೋಣ. ಆ ಷರತ್ತು ನಿಮಗೆ ಒಪ್ಪಿಗೆಯಾದರೇನೆ ನಾನು ವಿಷಯ ಹೇಳುತ್ತೇನೆ. ನಿಮಗೆ ಒಪ್ಪಿಗೆಯಾಗದಿದ್ದರೆ ಏನು ಹೇಳದೆ ಬಿಟ್ಟು ಹಾಕುತ್ತೇನೆ.

ಶಂಖುದತ್ತನ ಆ ಮಾತುಗಳನ್ನು ಕೇಳಿದ ಮೂರು ಮತದವರು ಏನು ಆ ಷರತ್ತೆಂದು ಕೇಳಿದರು.

**ಶಂಖುದತ್ತ :–** ತಾವು ಅನುಸರಿಸುತ್ತಿರುವ ಮತಕ್ಕಿಂತ ಬೇರೆ ವಿಧಾನ ಇಲ್ಲದೆ ಮತ ಸರಿಯಾದುದೆಂದು ತಿಳಿದಾಗ ಮತ್ತು ತಾವು ವಿಶ್ವಾಸಿಸುತ್ತಿರುವ ದೇವರಿಗಿಂತ ಬೇರೆ ವಿಧಾನದಲ್ಲಿರುವ ದೇವರು ಅತ್ಯುನ್ನತನೆಂದು ತಿಳಿದಾಗ ಯಾವುದಾದರೆ ಸತ್ಯವೊ ಆ ಸತ್ಯವನ್ನೇ ಅನುಸರಿಸಿ ತಾವು ತಿಳಿದ ಮಾರ್ಗವನ್ನು ಅಂದರೆ ತಾವು ವಾದಿಸುತ್ತಿದ್ದ ಮಾರ್ಗವನ್ನು ಬಿಟ್ಟು ಸತ್ಯಮಾರ್ಗವನ್ನು ಕುರಿತು ವಾದಿಸುತ್ತೇವೆಂದು ನೀವು ಒಪ್ಪಿಕೊಂಡರೆ ನಾನು ಹೇಳುತ್ತೇನೆ. ಮೂರು ಮಾರ್ಗಗಳಲ್ಲಿ ಯಾವ ಮಾರ್ಗ ಸರಿಯಾದುದಾದರು ಉಳಿದವರು ಅದನ್ನೇ ಅನುಸರಿಸಬೇಕು. ಒಂದುವೇಳೆ ಎಲ್ಲದಕ್ಕಿಂತ ಮೀರಿದ ಪದ್ಧತಿ ಬೇರೊಂದಿದ್ದರು ಅದನ್ನು ಕುರಿತು ಯೋಚಿಸಿ ಸತ್ಯವನ್ನು ತಿಳಿದುಕೊಂಡು ಆ ಮಾರ್ಗವನ್ನೇ ಅನುಸರಿಸುತ್ತೇವೆಂದು ಒಪ್ಪಿಕೊಂಡರೆ ನಾನು ಮಾತನಾಡುತ್ತೇನೆ. ಒಂದು ವೇಳೆ ನನ್ನ ಮಾತುಗಳಲ್ಲಿ ಸತ್ಯವಿಲ್ಲದೇ ಹೋದರೆ ಯಾರ ಮತವನ್ನು ಅವರು ಅನುಸರಿಸಬಹುದು.

ಶಂಖುದತ್ತನ ಮಾತುಗಳನ್ನು ಕೇಳಿದ ಮೂವರು ನನ್ನದೇ ಸರಿಯಾದ ಮಾರ್ಗ ಆದ್ದರಿಂದ ಉಳಿದವರು ಈ ನಿಬಂಧನೆ ಪ್ರಕಾರ ನನ್ನ ಮತವನ್ನೇ ಅನುಸರಿಸಬೇಕಾಗುತ್ತದೆ. ಆದ್ದರಿಂದ ಈತನ ಷರತ್ತಿಗೆ ಒಪ್ಪಿಕೊಂಡು ಕೇಳೋಣ ವೆಂದುಕೊಂಡರು. ಈ ವಿಧವಾಗಿ ಅವರವರ ನಂಬಿಕೆಗಳ ಪ್ರಕಾರ ನನ್ನ

ಮತವೆ ದೊಡ್ಡದಾಗುತ್ತದೆಂದು ಅವರವರ ಮನಸ್ಸಲ್ಲಿ ಅವರು ಅಂದುಕೊಂಡು ಶಂಖುದತ್ತನ ಷರತ್ತಿಗೆ ಎಲ್ಲರು ಒಪ್ಪಿಕೊಂಡರು. ಆಗ ಶಂಖುದತ್ತ ಈ ವಿಧದಲ್ಲಿ ಹೇಳಲು ಪ್ರಾರಂಭಿಸಿದನು.

**ಶಂಖುದತ್ತು :-** ಕಳಿಂಗ ಎಂಬ ಒಂದು ದೇಶದಲ್ಲಿ ನಲನು ಎನ್ನುವಾತನು ಒಳ್ಳೆಯ ಹೆಸರು ಪ್ರಖ್ಯಾತಿಗಳನ್ನು ಗಳಿಸಿದ್ದನು. ಆ ದೇಶದಲ್ಲಿ ಶಿಲ್ಪಕಲೆಯಲ್ಲಿ ಆತನನ್ನು ಮೀರಿದವರು ಯಾರೂ ಇಲ್ಲ. ಅಷ್ಟು ದೊಡ್ಡ ವಿದ್ಯೆಯಿರುವ ಆತನಿಗೆ ಒಬ್ಬ ಶಿಷ್ಯನು ಇದ್ದನು. ಆ ಶಿಷ್ಯನಿಗೆ ನಲನೆ ಆರ್ಯನೆಂದು ಹೆಸರು ಇಟ್ಟಿದ್ದನು. ಆರ್ಯನಿಗೆ ತನ್ನ ಶಿಲ್ಪಕಲೆಯನ್ನು ಕಲಿಸಿದನು. ಆರ್ಯನು ತನ್ನ ಗುರುವಿನಷ್ಟು ಅಲ್ಲದೆ ಹೋದರೂ ಶಿಲ್ಪಕಲೆಯಲ್ಲಿ ಸ್ವಲ್ಪ ಪ್ರತ್ಯೇಕತೆ ಹೊಂದಿದ್ದನು. ಶಿಷ್ಯನ ಕೆಲಸದಲ್ಲಿ ಸ್ವಲ್ಪ ತೃಪ್ತಿ ಹೊಂದಿದ ನಲನು ಇರುವುದನ್ನೆಲ್ಲ ಶಿಷ್ಯನಿಗೆ ಒಪ್ಪಿಸಿ ಒಂದು ದಿನ ಹೇಳದೆ ತ್ರಿಲಿಂಗ ದೇಶಕ್ಕೆ ಹೋದನು. ಹೋಗುವಾಗ ಮೊದಲಿನಿಂದ ತನ್ನ ಅನುಚರನಾಗಿದ್ದ ವ್ಯಕ್ತಿಯನ್ನು ಸಹ ಕರೆದುಕೊಂಡು ಹೋದನು. ತ್ರಿಲಿಂಗ ದೇಶದಲ್ಲಿ ನಲನು ತನ್ನ ಹೆಸರಿಗೆ ಮತ್ತೊಂದು ಅಕ್ಷರವನ್ನು ಸೇರಿಸಿ ಮನಲನು ಎಂಬ ಹೆಸರಿನಿಂದ ಚಲಾವಣೆ ಆಗತೊಡಗಿದನು. ಅಲ್ಲಿಯು ಸಹ ತನ್ನ ಶಿಲ್ಪಕಲೆ ನೈಪುಣ್ಯದಿಂದ ಎಲ್ಲರಿಂದ ಪ್ರಶಂಸಿಸಲ್ಪಟ್ಟನು. ಕಳಿಂಗ ದೇಶದ ಹಾಗೆ ತ್ರಿಲಿಂಗ ದೇಶದಲ್ಲಿಯು ಸಹ ಒಬ್ಬ ಶಿಷ್ಯನನ್ನು ತಯಾರು ಮಾಡಿ ತನ್ನ ವಿದ್ಯೆಯನ್ನು ದಾರೆಯೆರೆದನು. ಇಲ್ಲಿಯು ಸಹ ಶಿಷ್ಯನಿಗೆ ತಾನೇ ಹೆಸರಿಟ್ಟನು. ಕಳಿಂಗ ದೇಶದಲ್ಲಿ ತನ್ನ ಶಿಷ್ಯನಿಗೆ ಆರ್ಯನೆಂದು ಹೆಸರು ಇಟ್ಟ ಮನಲನು ಇಲ್ಲಿ ತ್ರಿಲಿಂಗ ದೇಶದಲ್ಲಿ ಆ ಹೆಸರಿಗೆ ಒಂದು ಅಕ್ಷರವನ್ನು ಸೇರಿಸಿ ಅನಾರ್ಯನು ಎಂದು ಹೆಸರು ಇಟ್ಟನು. ಇಲ್ಲಿ ವಿಶೇಷವೇನೆಂದರೆ ಕಳಿಂಗ ದೇಶದಲ್ಲಿದ್ದ ಮೊದಲ ಶಿಷ್ಯನಿಗೆ ಗುರುಗಳು ತ್ರಿಲಿಂಗ ದೇಶಕ್ಕೆ ಹೋದ ವಿಷಯವಾಗಲಿ, ಅಲ್ಲಿನ ಹೆಸರು ಬದಲಾವಣೆಯಾದ ವಿಷಯವಾಗಲಿ, ಅಲ್ಲಿ ಮತ್ತೊಬ್ಬ ಶಿಷ್ಯನಿರುವ ವಿಷಯವಾಗಲಿ ತಿಳಿದಿಲ್ಲ. ಆ ಶಿಲ್ಪಕಲೆ ಗುರು ಅಲ್ಲಿಯು ಸಹ ಸ್ವಲ್ಪ ಕಾಲವಿದ್ದು ಮೊದಲ ಹಾಗೆ ಅಲ್ಲಿಯು ಸಹ ಹೇಳದಂತೆ ತನ್ನ ಅನುಚರನೊಂದಿಗೆ ಮತ್ತೊಂದು

**ಜಾನ್ :–** ಮೂವರ ಗುರುವು ಒಬ್ಬನೇ ಅಲ್ಲವೆ.

**ಬಾಷಾ :–** ಮೂವರ ಗುರುವು ದೊಡ್ಡವನೆ.

**ವೈಶ್ಯನು :–** ಇಲ್ಲಿ ಇಂತವನ ಗುರು ಪ್ರತ್ಯೇಕ ಅನ್ನುವುದಕ್ಕಿಲ್ಲ. ಅವರಂದುಕೊಂಡಂತೆ ಮೂವರ ವಾದ ಸರಿಯಾದದ್ದೆ. ಅವರವರ ಗುರುವು ಬೇರೆ ಬೇರೆ ಅಲ್ಲವಾದ್ದರಿಂದ ಮೂವರ ಗುರು ದೊಡ್ಡವನೆಂದೇ ಅನ್ನಬಹುದು.

**ಶಂಖುದತ್ತ :–** ನಮಗೆ ಮೂವರ ಗುರು ಒಬ್ಬನೆಯೆನ್ನುವ ವಿಷಯ ಗೊತ್ತಿದೆ, ಅವರಿಗೆ ಗೊತ್ತಿಲ್ಲ ಅಲ್ಲವೆ! ಒಬ್ಬರ ಗುರು ದೊಡ್ಡವನಾದರೆ ಮತ್ತೊಬ್ಬರ ಗುರು ಕಡಿಮೆಯಾದವನೆಂದೇ ಅಲ್ಲವೆ ಅವರ ವಾದ. ಮೂವರು ನಮ್ಮೆಲ್ಲರ ಗುರು ಒಬ್ಬನೇಯೆಂದು ಒಪ್ಪಿಕೊಂಡಾಗ ಅಲ್ಲವೆ ಸಮಸ್ಯೆ ಇಲ್ಲದಂತೆ ಹೋಗುವುದು. ಅವರನ್ನು ಒಪ್ಪಿಸುವುದಕ್ಕೆ ಏನಾದರೂ ಮಾರ್ಗ ಇದೆಯಾ?

**ಜಾನ್ :–** ಆ ಗುರುವೇ ಬಂದು ನಾನು ನಿಮ್ಮ ಮೂವರಿಗು ಗುರುವೆಂದು ಹೇಳಬೇಕು.

**ಶಂಖುದತ್ತ :–** ಗುರುವು ಸತ್ತು ಹೋಗಿದ್ದಾನೆ, ಇಲ್ಲ. ಆತನು ಬಂದು ಹೇಳುವುದು ಅಸಾಧ್ಯ.

**ಬಾಷಾ :–** ಇಲ್ಲೊಂದು ಮಾರ್ಗವಿದೆ. ಗುರುವು ಬದುಕಿರುವಾಗ ಇದ್ದ ಗುರುವಿನ ಅನುಚರನು ಒಬ್ಬನಿದ್ದಾನಲ್ಲ! ಆತನು ಸತ್ತುಹೋಗಿಲ್ಲವಲ್ಲ!

**ವೈಶ್ಯ :–** ಹೌದು ಗುರುಗಳ ಅನುಚರನು ಕಳಿಂಗ, ತ್ರಿಲಿಂಗ, ಅನಂತಲಿಂಗ ದೇಶಗಳನ್ನು ನೋಡಿದ್ದಾನೆ, ಹಾಗೇ ಆಯಾ ದೇಶಗಳಲ್ಲಿ ಶಿಷ್ಯರಾದ ಆರ್ಯ, ಅನಾರ್ಯ, ಅಮನಾರ್ಯ ಅನ್ನುವವರನ್ನು ನೋಡಿದ್ದಾನೆ. ಮತ್ತು ಮೂರು ದೇಶಗಳಲ್ಲಿ ಗುರುಗಳು ನಲನು, ಮನಲನು, ಅಮನಲನು ಎನ್ನುವ ಹೆಸರುಗಳಿಂದಿರುವುದು ನೋಡಿದ್ದಾನೆ. ಎಲ್ಲ ತಿಳಿದ ಗುರುಗಳ ಅನುಚರನು ಬಂದು ಹೇಳಿದರೆ ಆ ಸಮಸ್ಯೆ ಇಲ್ಲದಂತಾಗುತ್ತದೆ.

ಶಂಖುದತ್ತ :– ಹೇಗೆ ಎಲ್ಲಾ ತಿಳಿದ ಗುರುಗಳ ಅನುಚರನು ಹೇಳಿದರೆ ಅವರ ಸಮಸ್ಯೆ ಕಿತ್ತು ಹೋಗುತ್ತದೊ ಹಾಗೇ ಮೂರನೆಯವನಾದ ಒಬ್ಬ ವ್ಯಕ್ತಿ ಹೇಳಿದರೆ ನಿಮ್ಮ ಸಮಸ್ಯೆ ಇಲ್ಲದಂತಾಗುತ್ತದೆ.

**ಬಾಷಾ :–** ಅಂತಹ ವ್ಯಕ್ತಿ ಯಾರಾದರೂ ಇದ್ದಾನಾ?

**ಜಾನ್ :–** ಅದು ಗುರುಗಳ ವಿಷಯ ಇದು ದೇವರ ವಿಷಯ ಅಲ್ಲವೆ!

**ವೈಶ್ಯ :–** ಅಲ್ಲಾದರೆ ಮೂರು ದೇಶಗಳನ್ನು, ಮೂರು ಶಿಷ್ಯರ ಹೆಸರುಗಳನ್ನು ಮೂವರು ಗುರುಗಳ ಹೆಸರುಗಳನ್ನು ತಿಳಿದ ವ್ಯಕ್ತಿಯಾಗಿರುವುದರಿಂದ ಹೇಳಿದ್ದಾನೆ. ಇಲ್ಲಿಯು ಸಹ ಮೂರು ಮತಗಳ ದೇಶಗಳನ್ನು, ಮೂರು ಮತಗಳ ಹೆಸರುಗಳನ್ನು, ಮೂರು ಮತಗಳ ದೇವರುಗಳನ್ನು ತಿಳಿದಂತಹ ಜ್ಞಾನಿ ಬೇಕಲ್ಲವೆ!

**ಶಂಖುದತ್ತ :–** ಮೂರು ದೇಶಗಳನ್ನು, ಮೂರು ಮತಗಳನ್ನು, ಮೂರು ದೇವರುಗಳನ್ನು ತಿಳಿದಂತಹ ಜ್ಞಾನಿಯನ್ನು ತ್ರಿಜ್ಞಾನಿ ಅನ್ನುತ್ತೇವೆ. ಅಂತಹ ತ್ರಿಜ್ಞಾನಿ ಈ ದೇಶದಲ್ಲಿ ನಮಗೆ ಸಮೀಪದಲ್ಲಿಯೆ ಇದ್ದಾನೆ. ಆತನು ತನ್ನ ತ್ರಿಜ್ಞಾನದಿಂದ ನಿಮ್ಮ ಸಂಶಯಕ್ಕೆ ಉತ್ತರ ಹೇಳುವನು. ಅಲ್ಲಿಗೆ ಹೋದರೆ ನಿಮ್ಮ ಸಮಸ್ಯೆ ಇಲ್ಲದಂತಾಗುತ್ತದೆ.

ಅವರ ವಾದ ತೀವ್ರತರ ವಾದುದಾಗಿರುವುದರಿಂದ ಅದಕ್ಕೆ ಪರಿಷ್ಕಾರ ತಿಳಿದುಕೊಳ್ಳಬೇಕೆಂಬ ಛಲದಿಂದ ಶಂಖುದತ್ತನ ಜೊತೆಗೆ ಮೂವರು ಹೊರಟು ಹೋದರು. ಅಲ್ಲಿಗೆ ಸಮೀಪದಲ್ಲಿಯೆ ಒಂದು ಅಡವಿ. ಅದರಲ್ಲಿ ಒಂದೇ ಒಂದು ಆಲದ ಮರ ಎತ್ತರವಾಗಿ ಬೆಳೆದು ಬೇರುಗಳು ಇಳಿದು ವಿಶಾಲವಾಗಿ ವ್ಯಾಪಿಸಿದೆ. ಅಲ್ಲಿ ಬಹಳ ಕಾಲದಿಂದ ಒಬ್ಬ ವ್ಯಕ್ತಿ ಆ ಗಿಡದ ಕೆಳಗೆ ಇದ್ದಾನೆಂದು ಎಲ್ಲರೂ ಅಂದುಕೊಳ್ಳುತ್ತಿದ್ದರು. ಈ ನಾಲ್ವರು ಆಲದ ಮರದ ಕೆಳಗಿರುವ ವ್ಯಕ್ತಿ ಹತ್ತಿರಕ್ಕೆ ಹೋದರು. ಅಲ್ಲಿಗೆ ಹೋಗಿ ನೋಡಿದರೆ ಅಲ್ಲಿದ್ದ ಮನುಷ್ಯನಲ್ಲಿ ಯಾವ ಪ್ರತ್ಯೇಕತೆ ಕಾಣಿಸಲಿಲ್ಲ. ಈತನಾ ಇಷ್ಟು ದೊಡ್ಡ ಸಮಸ್ಯೆಗೆ ಉತ್ತರ ಹೇಳುವುದು. ಈತನಿಗೆ ತ್ರಿಜ್ಞಾನ ತಿಳಿದಿದೆಯಾ ಎಂದು ಅಂದುಕೊಂಡರು

ಜಾನ್, ಬಾಷಾ, ವೈಶ್ಯ. ಶಂಖುದತ್ತನು ಅಲ್ಲಿದ್ದ ವ್ಯಕ್ತಿಗೆ ನಮಸ್ಕರಿಸಿ ಇವರ ಸಮಸ್ಯೆ ಇದು. ಇದಕ್ಕೆ ನೀವೇಸರಿಯಾದ ಸಮಾಧಾನ ಕೊಡುವಿರೆಂದು ಕೇಳಿದನು ಅದಕ್ಕೆ ಆ ಯೋಗಿ ಮುಗುಳ್ನಗೆ ನಕ್ಕು ಕುಳಿತುಕೊಳ್ಳಲು ಸೂಚಿಸಿದನು. ಏನು ನಿಮ್ಮ ಸಮಸ್ಯೆ ಎನ್ನುವ ಹಾಗೆ ಅವರ ಕಡೆ ನೋಡಿದನು.

**ಶಂಖುದತ್ತ :–** ಇವರಿಗೆ ತ್ರಿಜ್ಞಾನ ಎಂದರೆ ಏನೊ ಮೊದಲು ಹೇಳಬೇಕು ಸ್ವಾಮಿಗಳೇ.

**ಯೋಗಿ :–** ಸರ್ವ ದೇಶಗಳನ್ನು, ಸರ್ವಕಾಲಗಳನ್ನು, ಸರ್ವ ವ್ಯಕ್ತಿಗಳನ್ನು ತಿಳಿದವರನ್ನು ತ್ರಿಜ್ಞಾನಿ ಅನ್ನುತ್ತಾರೆ.

**ಶಂಖುದತ್ತ :–** ಪ್ರಸ್ತುತ ಕಾಲದಲ್ಲಿ ಜಗತ್ತಿನಲ್ಲಿ ತ್ರಿಜ್ಞಾನಿ ನೀವೊಬ್ಬರೆ ಇರುವುದೆಂದು ತಿಳಿದುಕೊಂಡ ನಾನು ಇವರ ಸಂಶಯ ಬಗೆಹರಿಸುವುದಕ್ಕೆ ತಮ್ಮಲ್ಲಿಗೆ ಕರೆದುಕೊಂಡು ಬಂದಿದ್ದೇನೆ.

**ಯೋಗಿ :–** ನಿಮ್ಮ ಸಮಸ್ಯೆ ನೀವು ಹೇಳದೇ ತಿಳಿಯುತ್ತಿದೆ. ನಾನು ಒಂದು ಮಾತು ಕೇಳುತ್ತಿದ್ದೇನೆ. ನಿಮಗೆ ಮನುಷ್ಯರಿಗೆ ದೇವರ್‍ಯಾರೊ ಬೇಕಾ? ಮತಕ್ಕೆ ದೇವರ್‍ಯಾರೊ ಬೇಕಾ?

ಅಲ್ಲಿಯವರೆಗು ಅಮಾಯಕನೆಂದುಕೊಂಡ ಯೋಗಿಯನ್ನು ಆ ಮಾತಿಗೆ ಏನೊ ದೊಡ್ಡತನವಿರುವ ವ್ಯಕ್ತಿಯಂತೆ ಉಳಿದ ಮೂವರು ಲೆಕ್ಕಹಾಕಿಕೊಂಡರು.

**ಶಂಖದತ್ತ :–** ಸ್ವಾಮಿಯವರೆ! ಇವರು ಮೂವರು ಮೂರು ಮತಗಳಿಗೆ ಸೇರಿದವರು. ನಮ್ಮ ಮತ ದೇವರು ದೊಡ್ಡವನೆಂದು ಒಬ್ಬರು ಅಂದರೆ ಉಳಿದವರು ಅಲ್ಲ ನಮ್ಮ ಮತ ದೇವರು ದೊಡ್ಡವನು ಅನ್ನುತ್ತಿದ್ದಾರೆ. ಇವರ ಮತಗಳಿಗೆ ದೇವರ್‍ಯಾರಾಗಿರುವುದು ತಿಳಿಸಬೇಕು.

**ಯೋಗಿ :–** ಮತದಲ್ಲಿರುವುದು ಮನುಷ್ಯರೇ ಆದ್ದರಿಂದ ಮನುಷ್ಯರಿಗೆ ದೇವರು ಯಾರೊ ತಿಳಿದರೆ ಮತಕ್ಕು ಸಹ ತಿಳಿಯುತ್ತದೆ.

ಮತ ಬೇರೆಯಾದಷ್ಟು ಮಾತ್ರಕ್ಕೆ ಮನುಷ್ಯರು ಬೇರೆಯಲ್ಲ ಅಲ್ಲವೆ! ಮನುಷ್ಯರೆಲ್ಲರು ಒಂದೇ ದೇವರೆಲ್ಲರಿಗು ಒಬ್ಬನೇ. ನೀವು ಶಂಖದತ್ತನು ಹೇಳಿದಾಗ ಕೇಳಿದ ಕಥೆಯಂತೆ ಹಿಂದೂ ಮತವನ್ನು **ಭಾರತ ದೇಶದಲ್ಲಿ, ಇಜ್ರಾಯಿಲ್ ದೇಶದಲ್ಲಿ ಕ್ರೈಸ್ತಮತವನ್ನು, ಅರಬ್ ದೇಶದಲ್ಲಿ ಇಸ್ಲಾಮ್ ಮತವನ್ನು ತಯಾರು ಮಾಡಿದವನು ಒಬ್ಬನೇ**. ಒಬ್ಬನೇ ನಲನು, ಮನಲನು, ಅಮಲನಂತೆ ಮೂರು ದೇಶಗಳಲ್ಲಿ ಮೂವರು ಶಿಷ್ಯರನ್ನು ತಯಾರು ಮಾಡಿದಂತೆ, ಒಬ್ಬ ದೇವರೆ ಮೂರು ದೇಶಗಳಲ್ಲಿ ಮೂರು ಮತಗಳನ್ನು ತಯಾರು ಮಾಡಿದ್ದಾನೆ. ಮೂವರಿಗು ಒಬ್ಬನೇ ಗುರುವೆಂದು ಆರ್ಯನು, ಮನಾರ್ಯನು, ಅಮನಾರ್ಯನಿಗೆ ತಿಳಿಯದಂತೆ ಮೂರು ಮತದವರಿಗು ಒಬ್ಬನೇ ದೇವರೆಂದು ತಿಳಿಯದಿರುವು ದರಿಂದ ಅವರು ನಮ್ಮ ಗುರು ಬೇರೆ, ನಮ್ಮ ಗುರು ಬೇರೆ ಅನ್ನುವಂತೆ ನೀವು ನಮ್ಮ ದೇವರು ಬೇರೆ ನಮ್ಮ ದೇವರು ಬೇರೆ ಅನ್ನುತ್ತಿದ್ದೀರ. ಕಥೆ ಪೂರ್ತಿ ತಿಳಿದ ನಂತರ ಗುರು ಬೇರೆಯೆಂದು ಹೇಗೆ ಹೇಳುವುದಕ್ಕೆ ಅವಕಾಶವಿಲ್ಲವೊ ಪೂರ್ತಿ ಜ್ಞಾನ ತಿಳಿದ ನಂತರ ದೇವರು ಬೇರೆಯೆಂದು ಹೇಳಲಾರರು.

**ಬಾಷಾ :–** ಕಥೆಯಲ್ಲಿ ಗುರುಗಳ ಅನುಚರನು ಮೂರು ದೇಶಗಳಲ್ಲಿ ಗುರುವಿನೊಂದಿಗೆ ಇದ್ದಾನೆ ಆದ್ದರಿಂದ ಆತನ ಆಧಾರದಿಂದ ಎಲ್ಲರ ಗುರು ಒಬ್ಬನೇಯೆಂದು ತಿಳಿದಿದೆ. ಇಲ್ಲಿ ಮೂರು ದೇಶಗಳಲ್ಲಿ, ಮೂರು ಮತಗಳಿಗು ದೇವರು ಒಬ್ಬನೇ ಯೆಂದು ಯಾರು ನೋಡಿದ್ದಾರೆ?

**ಯೋಗಿ :–** ನಾನು ನೋಡಿದ್ದೇನೆ.

**ಜಾನ್ :–** ನೀನು ನಮ್ಮ ಹಾಗೆ ಮನುಷ್ಯನೆ ಅಲ್ಲವೆ ಮೂರು ಕಾಲದಲ್ಲಿನ ದೇವರನ್ನು ಹೇಗೆ ನೋಡಿದ್ದೀಯ?

**ಯೋಗಿ :–** ಅದೇ ನನ್ನೊಳಗಿನ ಪ್ರತ್ಯೇಕತೆ. ನಿಮಗಿಲ್ಲದಿರುವುದು ನನಗಿರುವುದು ಅದು ಒಂದೇ. ನೀವು ಯಾರಾದರು ಮೂರನೆಯವರೆ, ನಾನು ಎರಡನೆಯವನು. ಎರಡನೆಯವನಿಗೆ ತಿಳಿಯದಿರುವವು ಯಾವುವು ಇಲ್ಲ.

**ವೈಶ್ಯ :–** ನಾವು ಮೂರನೆಯವರೆಂದರೆ ಏನೊ, ನೀನು ಎರಡನೆಯವನೆಂದರೆ ಏನೊ ನಮಗೆ ಏನು ಅರ್ಥವಾಗಲಿಲ್ಲ, ಇನ್ನು ಮೊದಲನೆಯವನ್ಯಾರೊ?

**ಯೋಗಿ :–** ಈ ವಿಷಯ ಅರ್ಥವಾಗಿದ್ದರೆ ಈ ತಗಾದೆ ನಿಮಗೆ ಬರುತ್ತಿರಲಿಲ್ಲ. ಮೂರನೆಯವರೆಂದರೆ ಒಂದು ನಿಮಿಷದ ಮೊದಲು ಏನು ನಡೆಯುತ್ತದೊ ತಿಳಿಯದವರು. ಎರಡನೆಯವನೆಂದರೆ ಸರ್ವ ಕಾಲಗಳನ್ನು, ಸರ್ವಾವಸ್ಥೆಗಳನ್ನು ಸರ್ವರನ್ನು ತಿಳಿಯುವವನು. ಇನ್ನು ಮೊದಲನೆಯವನೆಂದರೆ ತಿಳಿಯದವನಿಗು ತಿಳಿದವನಿಗು ಅತೀತನಾಗಿ ಇರುವನು. ಆತನೇ ದೇವರು.

**ಬಾಷಾ :–** ಮೊದಲನೆಯವನೆಂದರೆ ದೇವರಾ!

**ವೈಶ್ಯ :–** ಆದರೆ ಎಲ್ಲ ತಿಳಿದ ಎರಡನೆಯವನನ್ನು ಏನನ್ನಬೇಕು?

**ಯೋಗಿ :–** ಎಲ್ಲ ಕಾಲಗಳಲ್ಲಿಯು ಎಲ್ಲರಲ್ಲಿ ಇರುವವನನ್ನು ಆತ್ಮ ಅನ್ನಬೇಕು. ಆತ್ಮ ಎಲ್ಲರಲ್ಲಿ ಅಡಗಿಕೊಂಡಿದೆ ಆದ್ದರಿಂದ ಅದಕ್ಕೆ ಎಲ್ಲ ತಿಳಿದಿದೆ. ಎಲ್ಲರಲ್ಲಿ ಅಡಗಿರುವ ಆತ್ಮಗಿಂತ ಬೇರೆಯಾಗಿ ಅತೀತನಾಗಿರುವವನು ದೇವರು ಆದ್ದರಿಂದ ದೇವರನ್ನು ಪರಮಾತ್ಮ ಅನ್ನುತ್ತೇವೆ. ಭವಿಷ್ಯತ್ತು ಏನು ತಿಳಿಯದವನಾದ ಮೂರನೆಯವನು ಕೇವಲ ಜೀವಿಸುವವನೆ ಆದ್ದರಿಂದ ಜೀವಿಯು ಅಥವಾ ಜೀವಾತ್ಮ ಅನ್ನುತ್ತಿದ್ದೇವೆ.

**ಬಾಷಾ :–** ನಮ್ಮ ಅಲ್ಲಾ ಯಾರೊ ನಿಮಗೆ ತಿಳಿದಿದೆಯಲ್ಲ! ಆತನು ಎಲ್ಲರಿಗಿಂತ ದೊಡ್ಡವನೆಂದು ಸಹ ತಿಳಿದಿದೆಯಲ್ಲವೆ!

**ಯೋಗಿ :–** ಅಲ್ಲಾ ಎಲ್ಲರಿಗಿಂತ ದೊಡ್ಡವನೆಂದು ನನಗು ಗೊತ್ತಿದೆ, ನಿನಗು ಸಹ ಗೊತ್ತಿದೆ. ಹಾಗೆ ಅಲ್ಲಾನೇ ಬೇರೆ ಮತದಲ್ಲಿ ಬೇರೆ ಹೆಸರಿನಿಂದಿದ್ದಾನೆಂದು ಸಹ ನನಗೆ ಗೊತ್ತಿದೆ, ಅದು ನಿನಗೆ ಗೊತ್ತಿಲ್ಲ. ಆದ್ದರಿಂದ ಕ್ರೈಸ್ತ ಮತದಲ್ಲಿನ ಯೆಹೋವಾನನ್ನು ನೀನು ದೇವರು ಅಲ್ಲವೆನ್ನುತ್ತೀಯ. ನಿನ್ನ ಹಾಗೆ ಜಾನ್‌ರವರು ಇಸ್ಲಾಮ್‌ದಲ್ಲಿನ ಅಲ್ಲಾನನ್ನು ದೇವರಲ್ಲ ಅನ್ನುತ್ತಿದ್ದಾನೆ. ಇದು ಮೂರನೆಯವರಾದ

ಮನುಷ್ಯರೆಲ್ಲ ಅನ್ನುವ ಮಾತುಗಳೆ. ಪ್ರಪಂಚದಲ್ಲಿ ಒಬ್ಬ ದೇವರನ್ನಲ್ಲದೆ ಇತರರು ಯಾರೂ ಇಲ್ಲವೆಂದು ತಿಳಿದಾಗ ಅಲ್ಲಾನು ಯೆಹೋವಾನು ಇಬ್ಬರು ಒಂದೇಯೆಂದು ತಿಳಿಯುತ್ತದೆ. ಪ್ರಪಂಚವನ್ನು ಮನುಷ್ಯರನ್ನು ಹುಟ್ಟಿಸಿರುವುದು ಒಬ್ಬ ದೇವರೆ, ಪ್ರಪಂಚಕ್ಕೆ ಅಧಿಪತಿ ಒಬ್ಬನೇ. ಆತನನ್ನು ಇಸ್ಲಾಮ್‌ರು ಅಲ್ಲಾ ಎಂದು, ಕ್ರೈಸ್ತವರು ಯೆಹೋವಾ ಎಂದು ಕರೆಯುತ್ತಿದ್ದಾರೆ. ಒಂದು ಹಿಂದೂಮತದಲ್ಲಿ ಭಗವದ್ಗೀತೆಗಿಂತ ಮುಖ್ಯವಾಗಿ ವೇದಗಳನ್ನು, ಪರಮಾತ್ಮನಿಗಿಂತ ಮುಖ್ಯವಾಗಿ ವಿಷ್ಣು ಮೊದಲಾದ ದೇವತೆಗಳನ್ನು ಹೇಳಿಕೊಳ್ಳುತ್ತಿದ್ದಾರೆ. **ಯಾವುದು ಏನಾದರೂ, ಯಾರು ಹೇಗೆಂದುಕೊಂಡರು ಪ್ರಪಂಚಕ್ಕೆ ದೇವರು ಒಬ್ಬನೆ. ಆತನೆ ಅಲ್ಲಾ, ಯೆಹೋವಾ, ಪರಮಾತ್ಮ ಎಂದು ಮೂರು ಮತಗಳಲ್ಲಿ ಕರೆಯಲ್ಪಡುತ್ತಿದ್ದಾನೆ.**

**ಬಾಷಾ :–** ಆದರೆ ನಮ್ಮ ವಾದ ವೃಥಾ ಅಲ್ಲವೆ!

**ಯೋಗಿ :–** ವೃಥಾ ವಾದವೇ. ನಿಮ್ಮ ವಾದ ಒಂದು ಆನೆ, ಮೂವರು ಅಂಧರು ಇದ್ದಂತಿದೆ. ದೃಷ್ಟಿಯಿಲ್ಲದ ಕುರುಡನನ್ನು ಅಂಧನು ಅನ್ನುತ್ತೇವೆ. ಮೂವರು ಅಂಧರು ಒಂದು ಕಡೆ ಸೇರಿ ಒಂದು ಆನೆಯನ್ನು ಹಿಡಿದುಕೊಂಡು ಅವರಿಗೆ ಕಾಣಿಸದ ಕಾರಣದಿಂದ ಒಂದೇ ಆನೆಯನ್ನು ಮೂರು ವಿಧಗಳಲ್ಲಿ ವರ್ಣಿಸಿದ್ದಾರೆ. ಒಬ್ಬನು ಆನೆಯ ಕಾಲನ್ನು ಹಿಡಿದುಕೊಂಡು ಇದು ಸ್ತಂಭ ಎಂದನು. ಮತ್ತೊಬ್ಬನು ಆನೆ ಕಿವಿಯನ್ನು ಹಿಡಿದುಕೊಂಡು ಇದು ಕಾಳು ಮಾಡುವ ಮೊರ ಎಂದನು. ಮೂರನೆಯವನು ಆನೆಯ ಬಾಲವನ್ನು ಹಿಡಿದುಕೊಂಡು ಇದು ಹಗ್ಗ ಎಂದನು. ಅವರಿಗೆ ಬಿಡಿಬಿಡಿಯಾಗಿ ತಿಳಿದಿರುವುದು ಒಂದೇ ಆನೆಯಲ್ಲಿನ ಭಾಗಗಳೆಂದು ತಿಳಿದಿಲ್ಲ. ಕಣ್ಣಿದ್ದವನು ಅಲ್ಲಿಗೆ ಬಂದು ಇದು ಆನೆ ಎಂದು ಹೇಳಿದರೆ ಆದ್ರೇ ಆನೆ ಸ್ತಂಭದಂತಿದೆಯೆಂದು ಒಬ್ಬನು, ಕಾಳಿನ ಮೊರದಂತಿದೆಯೆಂದು ಮತ್ತೊಬ್ಬನು, ಹಗ್ಗದಂತಿದೆಯೆಂದು ಮೂರನೆಯವನು ಅನ್ನತೊಡಗಿದರು. ಕಣ್ಣಿರುವ ನಾಲ್ಕನೆಯವನು ನೀವು ಅಂದುಕೊಳ್ಳುತ್ತಿರುವ ಸ್ತಂಭ, ಮೊರ, ಹಗ್ಗ ಎನ್ನುವ ಮೂರು ಒಂದೇ ಆನೆಗಿರುವವೆ. ಆನೆ ಕಾಲು

ಸ್ತಂಭದಂತೆ, ಕಿವಿ ಕಾಳಿನ ಮೊರದಂತೆ ಬಾಲ ಹಗ್ಗದಂತೆ ಇದೆಯೆಂದು ವಿವರಿಸಿ ಹೇಳಿದರೆ ಆಗ ತಮ್ಮವಾದ ಸರಿಯಾದ್ದಲ್ಲ ವೆಂದು, ಅವರು ಹಿಡಿದುಕೊಂಡಿರುವುದು ಮೂರನ್ನಲ್ಲ ಒಂದೇ ಆನೆಯನ್ನೆಂದು ತಿಳಿದುಕೊಂಡರು. ಹಾಗೆ ಅಂಧರ ವಾದದಂತೆ ನೀವು ಒಂದೇ ದೇವರನ್ನು ಹಿಡಿದುಕೊಂಡು ಮೂರು ವಿಧಗಳಾಗಿ ಹೇಳುತ್ತಿದ್ದೀರ. ನೀವು ಹೇಳುತ್ತಿರುವುದು ಅಸಲಾದ ದೇವರನ್ನು ಕುರಿತೆ ಆದರೆ ತಿಳಿಯದ ಅಜ್ಞಾನದಿಂದ ಬೇರೆ ಬೇರೆ ಎಂದು ಹೇಳುತ್ತಿದ್ದೀರ.

**ಜಾನ್ :–** ಅಯ್ಯಾ! ನೀವು ಹೇಳುವಂತೆ ಪ್ರಪಂಚಕ್ಕೆಲ್ಲ ಒಂದೇ ದೇವರೆಂದು ನಮಗೆ ಗೊತ್ತು ಆದರೂ ಸ್ವಲ್ಪ ಅಜ್ಞಾನದಿಂದ ಬೇರೆ ದೇವರಿದ್ದಾನೆಂದರೆ ಆತನೆ ನಾನಂದುಕೊಂಡ ದೇವರೆಂದು ತಿಳಿದುಕೊಳ್ಳದೆ ಹೋದೆವು. ನೀವು ಹೇಳುವುದರಿಂದ ಇರುವುದು ಒಂದೇ ದೇವರೆಂದು, ಆತನೆ ಎಲ್ಲ ಮತಗಳಿಗು ದೊಡ್ಡವನೆಂದು ತಿಳಿಯಿತು.

**ವೈಶ್ಯ :–** ಇಸ್ಲಾಮ್, ಕ್ರೈಸ್ತ ಮತದಲ್ಲಾದರೂ ಅಲ್ಲಾ ಎಂದೊ, ಯೆಹೋವಾ ಎಂದೊ ಒಂದೇ ದೇವರನ್ನು ನಂಬಿಕೊಂಡಿದ್ದಾರೆ. ಆ ವಿಧದಲ್ಲಾದರೂ ಪರಮಾತ್ಮನನ್ನು ನಂಬದೆ ಅನೇಕ ಚಿಲ್ಲರೆ ದೇವರುಗಳನ್ನು ಇಟ್ಟುಕೊಂಡ ಹಿಂದೂ ಮತದಲ್ಲಿನ ಮನುಷ್ಯರೆ ಎಲ್ಲ ಮತದವರಿಗಿಂತ ಹೆಚ್ಚು ಅಜ್ಞಾನರಂತೆ ಇದ್ದಾರೆ. ನಿಮ್ಮ ಮಾತುಗಳಿಂದ ನಮ್ಮ ಅಜ್ಞಾನ ಹೋಯಿತು. ಇನ್ನಾದರು ಭಗವದ್ಗೀತೆಯನ್ನು ಪರಮಾತ್ಮನನ್ನು ವಿಶ್ವಾಸಿಸುತ್ತೇವೆ.

ಈ ವಿಧವಾಗಿ ಅಷ್ಟಕ್ಕೆ ಅವರ ವಾದ ಸವೆದುಹೋಗಿ ಮೂರು ಮತದವರು ಒಂದೇ ದೇವರ ಇರುವಿಕೆಯನ್ನು ತಿಳಿದುಕೊಂಡು ನಮ್ಮ ಮತದಲ್ಲಿ ದೇವರು ದೊಡ್ಡವನೆಂದರು ಪರವಾಗಿಲ್ಲವೆಂದು, ಇತರ ಮತಗಳ ದೇವರು ಕಡಿಮೆ ಎಂದು ಅನ್ನಬಾರದೆಂದು ತಿಳಿದುಕೊಂಡು ಅಲ್ಲಿಂದ ವಿರಾಮ ತೆಗೆದುಕೊಂಡು ಯಾರ ದಾರಿಯಲ್ಲಿ ಅವರು ಹೋದರು. ಶಂಖುದತ್ತ ಯೋಗಿಯ

ಬಳಿ ಅಪ್ಪಣೆ ತೆಗೆದುಕೊಂಡು ಸುವರ್ಣರಾಜ್ಯಕ್ಕೆ ಹೊರಟು ಹೋದನು. ಸುವರ್ಣರಾಜ್ಯ ಸುಸಂಪನ್ನ ದೇಶವಾಗಿತ್ತು. ಪ್ರತಿ ಕುಟುಂಬ ಕಷ್ಟಗಳಿಲ್ಲದೆ ಸುಖದಿಂದ ಬದುಕುತ್ತಿತ್ತು. ಇದೆಲ್ಲವು ರಾಜರ ದಯೆ ಎಂದು ಪ್ರಜೆಗಳು ಅಂದುಕೊಳ್ಳುತ್ತಿದ್ದರು. ಸುವರ್ಣರಾಜನು ಸಹ ತನ್ನ ರಾಜ್ಯ ಸುಭಿಕ್ಷವಾಗಿದೆಯೆಂದು ಅದೆಲ್ಲವು ತನ್ನ ಸಾಮರ್ಥ್ಯವೇ ಅಂದುಕೊಳ್ಳುತ್ತಿದ್ದನು. ಅಂತಹ ಪರಿಸ್ಥಿತಿಯಲ್ಲಿ ಶಂಖುದತ್ತ ಸುವರ್ಣ ರಾಜನ ಹತ್ತಿರಕ್ಕೆ ಹೋದನು. ಸುವರ್ಣರಾಜ ಶಂಖುದತ್ತ ನನ್ನು ನೋಡಿ ಎಷ್ಟೋ ಸಂತೋಷಿಸಿದವನಾಗಿ ಆದರದಿಂದ ಅಭಿಮಾನಿಸಿದನು.

**ಸುವರ್ಣಮಹಾರಾಜ :–** ನೀವು ನಮ್ಮ ರಾಜ್ಯಕ್ಕೆ ದಯಮಾಡಿರುವುದು ನಮಗೆ ಸಂತೋಷವನ್ನುಂಟುಮಾಡಿದೆ. ನಮ್ಮ ರಾಜ್ಯ ಮತ್ತಷ್ಟು ಸುಭಿಕ್ಷವಾಗಬಹುದು.

**ಶಂಖುದತ್ತ :–** ನಿಮ್ಮ ಹೆಸರಿಗೆ ತಕ್ಕಹಾಗೆ ನಿಮ್ಮ ರಾಜ್ಯ ಸುಭಿಕ್ಷವಾಗಿದೆ. ಹಾಗೆ ನಿಮ್ಮ ರಾಜ್ಯದಲ್ಲಿನ ಪ್ರಜೆಗಳಿಗೆ ಸುಜ್ಞಾನವಿರಬೇಕೆಂದು ಕೋರುತ್ತಿದ್ದೇನೆ. ಅವರಿಗೆ ಜ್ಞಾನ ಬೇಕೆಂದರೆ ಮೊದಲು ನಿನಗೆ ಜ್ಞಾನವಿರಬೇಕಲ್ಲವೆ!

**ಸುವರ್ಣರಾಜ :** ಹೌದು ಸ್ವಾಮಿ. “ಯಥಾ ರಾಜಾ ತಥಾ ಪ್ರಜಾ” ಎನ್ನುವಂತೆ ರಾಜ ಹೇಗಿದ್ದರೆ ಪ್ರಜೆಗಳು ಹಾಗಿರುತ್ತಾರೆ. ನನಗೆ ಆತ್ಮ ಜ್ಞಾನವಿಲ್ಲ ಆದ್ದರಿಂದ ನನ್ನ ಪ್ರಜೆಗಳಿಗೆ ಅದರಿಂದ ಪರಿಚಯ ಕಡಿಮೆ. ಆದ್ದರಿಂದ ನನ್ನ ಪ್ರಜೆಗಳು ಸುಭಿಕ್ಷರೆ ಆದರೆ ಸುಜ್ಞಾನಿಗಳಲ್ಲ.

**ಶಂಖುದತ್ತ :** ಆ ವಿಷಯವನ್ನು ನಾನು ಸಹ ಗ್ರಹಿಸಿದ್ದೇನೆ. ಪ್ರಜೆಗಳ ಜವಾಬ್ದಾರಿ ಯೆಲ್ಲ ಪ್ರಭುವಿನ ಮೇಲೆ ಇರುತ್ತದೆ. ಪ್ರಜೆಗಳಿಗೆ ಪ್ರಭುವಾದ ನೀನು ಪ್ರಜೆಗಳಿಗಾಗಿ ಏನು ಮಾಡಬೇಕೆಂದುಕೊಂಡಿದ್ದೀಯ?

**ಸುವರ್ಣರಾಜ :** ನಿಮ್ಮಿಂದ ಆತ್ಮಜ್ಞಾನ ತಿಳಿದುಕೊಂಡು ಅದನ್ನು ನನ್ನ ಪ್ರಜೆಗಳಿಗೆ ತಿಳಿಸುತ್ತೇನೆ. ಅದರಿಂದ ನನ್ನ ಪ್ರಜೆಗಳು ಸುಜ್ಞಾನಿಗಳಾಗಬಹುದು.

**ಶಂಖುದತ್ತ :** ನಿನ್ನದು ಸರಿಯಾದ ಯೋಚನೆಯೆ. ನೀನು ಕಾಡಿನಲ್ಲಿ ನನ್ನೊಂದಿಗೆ

ಭೇಟಿಯಾದಾಗ **ಆದ್ರೆ ಒಂದು ಮೇಲು, ಆಗದೇ ಹೋದರೆ ಎರಡು ಮೇಲು** ಎಂದು ಹೇಳಿದ್ದೆನು. ಅದನ್ನು ಕುರಿತು ನಂತರ ಹೇಳುತ್ತೇನೆಂದಿದ್ದೆನು.

**ಸುವರ್ಣ ರಾಜ :** ಹೌದು ಸ್ವಾಮಿ.

**ಶಂಖುದತ್ತ :** ನನಗೆ ಮೋಕ್ಷ ಬಂದರೆ ಒಂದು ಮೇಲು ಬಾರದೆ ಹೋದರೆ ಎರಡು ಮೇಲು ಅಂದಿದ್ದೆನು. ನನಗೆ ಮೋಕ್ಷ ಬರಬೇಕೆಂದು ಆತ್ಮಜ್ಞಾನವನ್ನು ತಿಳಿದುಕೊಂಡಿದ್ದೇನೆ. ಪ್ರತಿ ಮನುಷ್ಯ ಆತ್ಮಜ್ಞಾನವನ್ನು ತಿಳಿದಾಗಲೆ ಮೋಕ್ಷ ಹೊಂದುವನು.

**ಸುವರ್ಣರಾಜ :** ಆತ್ಮ ಎಂದರೇ ಏನು ಸ್ವಾಮಿ?

**ಶಂಖುದತ್ತು :** ಒಂದು ಪದಾರ್ಥದಲ್ಲಿ ಅಡಗಿರುವ ಶಕ್ತಿಯನ್ನು ಪರಮಾತ್ಮ ಅನ್ನುತ್ತೇವೆ. ಸಜೀವ ಶರೀರದಲ್ಲಿ ಅಡಗಿರುವ ಶಕ್ತಿಯನ್ನು ಆತ್ಮ ಅನ್ನುತ್ತೇವೆ. ಆತ್ಮದಲ್ಲಿ ಅಡಗಿರುವ ಚೈತನ್ಯವನ್ನು ಜೀವಾತ್ಮ ಅನ್ನುತ್ತೇವೆ. ಆತ್ಮಗಳು ಮೂರು ವಿಧಗಳು. ಒಂದು ಪರಮಾತ್ಮ, ಎರಡು ಆತ್ಮ, ಮೂರು ಜೀವಾತ್ಮ.

**ಸುವರ್ಣ ರಾಜ :** ಪದಾರ್ಥದಲ್ಲಿರುವುದು ಪರಮಾತ್ಮ. ಶರೀರದಲ್ಲಿರುವುದು ಆತ್ಮ ಎಂದು ಅರ್ಥವಾಯಿತು. ಆತ್ಮಕ್ಕೆಂದರೆ ಒಂದು ಶರೀರ ಅವಶ್ಯ ಹಾಗೆಯೇ ಆತ್ಮದೊಳಗಿರುವ ಜೀವಾತ್ಮ ಸಹ ಶರೀರವನ್ನು ಆಶ್ರಯಿಸಿದೆಯೆಂದು ಅರ್ಥ ವಾಯಿತು. ಪದಾರ್ಥವಾಗಲಿ, ಶರೀರವಾಗಲಿ ಇಲ್ಲದ ಕಡೆ ಯಾವ ಆತ್ಮಗಳು ಇಲ್ಲವೆಂದು ಅರ್ಥವಾಯಿತು.

**ಶಂಖುದತ್ತ :** ಪದಾರ್ಥ ಇಲ್ಲದಕಡೆ ಯಾವ ಆತ್ಮ ಇಲ್ಲೆನ್ನುವುದು ತಪ್ಪಾಗುತ್ತದೆ. ಪದಾರ್ಥವಿಲ್ಲದ ಶೂನ್ಯದಲ್ಲಿಯು ಸಹ ಪರಮಾತ್ಮವಿದೆ. ಪರಮಾತ್ಮ ಪದಾರ್ಥ ದಲ್ಲಿಯೆ ಅಲ್ಲದೆ ಬಯಲಿನಲ್ಲಿಯು ಸಹ ಅಡಗಿದೆ. ಹಾಗೆ ಆತ್ಮ ಸ್ಥೂಲಶರೀರ ದಲ್ಲಿಯೆ ಅಲ್ಲದೆ ಸ್ಥೂಲವಲ್ಲದ ಕಣ್ಣಿಗೆ ಕಾಣಿಸದ ಸೂಕ್ಷ್ಮ ಶರೀರದಲ್ಲಿ ಸಹ ಅಡಗಿಕೊಂಡಿದೆ. ಆತ್ಮ ಸೂಕ್ಷ್ಮದಲ್ಲಿದ್ದರೆ ಆತ್ಮದಲ್ಲಿರುವ ಜೀವಾತ್ಮ ಸಹ ಸೂಕ್ಷ್ಮದಲ್ಲಿ ಇರುತ್ತದೆ.

**ಸುವರ್ಣರಾಜ :** ಯಾವ ಪದಾರ್ಥವಿಲ್ಲದ ಕಡೆ ಪರಮಾತ್ಮ, ಹಾಗೆ ಶರೀರವಿಲ್ಲದ ಕಡೆ ಆತ್ಮ ಜೀವಾತ್ಮಗಳು ಇರುತ್ತವೆ. ಪದಾರ್ಥ ಇರುವ ಕಡೆ, ಇಲ್ಲದ ಕಡೆ ಪರಮಾತ್ಮ ಇದೆಯೆಂದು ತಿಳಿಯಬಹುದು. ಆತ್ಮ ಜೀವಾತ್ಮಗಳು ಶರೀರವಿಲ್ಲದ ಕಡೆ ಇರುತ್ತವೆಂದರೆ ವಿಚಿತ್ರವಾಗಿದೆ. ಶರೀರವಿಲ್ಲದ ಕಡೆ ಬಯಲು ಎಂದು ಅರ್ಥವಾಗುತ್ತಿದೆ. ಆ ಬಯಲಿನಲ್ಲಿ ಪರಮಾತ್ಮನಲ್ಲವೆ ಇರುವುದು.

**ಶಂಖುದತ್ತ :** ಕಾಣಿಸದಷ್ಟು ಮಾತ್ರಕ್ಕೆ ಎಲ್ಲ ಬಯಲೆಂದುಕೊಳ್ಳಬಾರದು. ಬಯಲು ಎಲ್ಲ ಒಂದೇ ಆದರೂ ಶರೀರಗಳು ಎರಡು ವಿಧಗಳು ಒಂದು ಕಾಣಿಸುವ ಸ್ಥೂಲಶರೀರ, ಎರಡನೆಯದು ಕಾಣಿಸದ ಸೂಕ್ಷ್ಮಶರೀರ. ಸ್ಥೂಲಶರೀರಗಳು ಪ್ರಪಂಚದಲ್ಲಿ ಕಾಣಿಸುತ್ತವೆ. ಹಾಗೆ ಸೂಕ್ಷ್ಮ ಶರೀರಗಳು ಪ್ರಪಂಚದಲ್ಲಿ ಕಾಣಿಸದೆ ಅನೇಕ ಕಡೆ ಇವೆ. ಕಾಣಿಸದ ಸ್ಥಳವೆಲ್ಲವು ಬಯಲೆಂದೇ ಅಲ್ಲ. ಆ ಬಯಲಿನಲ್ಲಿ ಸೂಕ್ಷ್ಮ ಶರೀರಗಳು ಸಹ ಇವೆ. ಕಣ್ಣಿಗೆ ಕಾಣಿಸುವ ಸ್ಥೂಲಪ್ರಪಂಚವೇ ಅಲ್ಲದೆ ಕಣ್ಣಿಗೆ ಕಾಣಿಸದ ಸೂಕ್ಷ್ಮ ಪ್ರಪಂಚವು ಸಹ ಇದೆ. ಆದ್ದರಿಂದ ಈ ಪ್ರಪಂಚವನ್ನು ಕಣ್ಣಿಗೆ ಕಾಣಿಸುವ ಪ್ರಪಂಚ, ಕಣ್ಣಿಗೆ ಕಾಣಿಸದ ಪ್ರಪಂಚ ಎಂದು ಎರಡು ವಿಧಗಳಾಗಿ ವಿಭಜಿಸಬಹುದು. ಕಾಣಿಸುವ ಪ್ರಪಂಚವನ್ನೇ ಈಗ ನಾವು ನೋಡುತ್ತಿದ್ದೇವೆ. ಕಾಣಿಸದ ಪ್ರಪಂಚವು ಸಹ ಸುಮಾರು ಇದರೊಂದಿಗೆ ಸಮಾನವಾಗಿ ಇದೆಯೆಂದು ಸಹ ತಿಳಿಯಬೇಕು.

**ಸುವರ್ಣರಾಜ :** ಕಣ್ಣಿಗೆ ಕಾಣಿಸದ ಪ್ರಪಂಚವಿದೆಯೆನ್ನುವುದು ಆಶ್ಚರ್ಯ ವಿಷಯವೇ. ಆದರೂ ನೀವು ಹೇಳುವುದರಿಂದ ಸ್ವಲ್ಪ ಅರ್ಥವಾಗಿದೆ. ಮೂರು ವಿಧಗಳ ಆತ್ಮಗಳು ಇವೆಯೆಂದು ಅದರಲ್ಲಿ ಪದಾರ್ಥದಲ್ಲಿ ಪರಮಾತ್ಮ ಸ್ಥೂಲ ಸೂಕ್ಷ್ಮ ಶರೀರಗಳಲ್ಲಿ ಆತ್ಮ ಜೀವಾತ್ಮಗಳು ಇವೆ ಎಂದು ಅರ್ಥವಾಯಿತು.

**ಶಂಖುದತ್ತು :** ನೀನು ಅರ್ಥ ಮಾಡಿಕೊಳ್ಳಬೇಕಾಗಿರುವುದು ಇನ್ನೂ ಇದೆ. ಕೇವಲ ಪದಾರ್ಥದಲ್ಲಿಯೆ ಅಲ್ಲದೆ ಪದಾರ್ಥವಿಲ್ಲದ ಬಯಲಿನಲ್ಲಿಯೂ ಪರಮಾತ್ಮ ವ್ಯಾಪಿಸಿದೆ. ಆತ್ಮ ಜೀವಾತ್ಮಗಳಿರುವ ಶರೀರದಲ್ಲಿ ಸಹ ಪರಮಾತ್ಮ

ಅವರಿಸಿಕೊಂಡಿದೆ. ಪರಮಾತ್ಮನಿಲ್ಲದ ಜಾಗವಂತು ಯಾವುದೂ ಇಲ್ಲ. ಜೀವಾತ್ಮ ಆತ್ಮಗಳಲ್ಲಿ ಸಹ ಪರಮಾತ್ಮ ವ್ಯಾಪಿಸಿದೆ. ಇದನ್ನು ಅನುಸರಿಸಿ **ಎಲ್ಲ ವ್ಯಾಪಿಸಿರುವುದು ಪರಮಾತ್ಮ ಎಂದು, ಶರೀರಗಳೊಳಗೆ ಶರೀರವೆಲ್ಲ ವ್ಯಾಪಿಸಿರುವುದು ಆತ್ಮ ಎಂದು, ಶರೀರವೆಲ್ಲ ಅಲ್ಲದೆ ಶರೀರದಲ್ಲಿ ಒಂದು ಕಡೆ ಮಾತ್ರ ರವೆಯಷ್ಟು ಅಡಗಿರುವುದು ಜೀವಾತ್ಮ ಎಂದು ತಿಳಿಯಬೇಕು**. ಇಲ್ಲಿಗೆ ಮೂರು ಆತ್ಮಗಳ ವಿವರ ಅವು ವ್ಯಾಪಿಸಿದ ಸ್ಥಳ ಅರ್ಥವಾಗಿದೆಯೆಂದುಕೊಳ್ಳುತ್ತೇನೆ.

**ಸುವರ್ಣರಾಜ :** ಆದರೆ ಈಗ ನಮ್ಮ ಶರೀರದಲ್ಲಿ ಮೂರು ಆತ್ಮಗಳು ಇವೆ ಎಂದು ಅರ್ಥವಾಯಿತು.

**ಶಂಖುದತ್ತ :** ನಿನ್ನ ಶರೀರದಲ್ಲಿರುವ ಮೂರು ಆತ್ಮಗಳಲ್ಲಿ ಜೀವಾತ್ಮನೇ ನೀನು, ಜೀವಾತ್ಮನಾದ ನೀನು ಈ ಪ್ರಪಂಚದಲ್ಲಿ ಸುವರ್ಣರಾಜನೆಂಬ ಹೆಸರಿನಿಂದ ವ್ಯವಹರಿಸುತ್ತಿದ್ದೀಯ.

**ಸುವರ್ಣರಾಜ :** ಮೂರು ಆತ್ಮಗಳಲ್ಲಿ ಜೀವಾತ್ಮನು ನಾನೆನ್ನುವುದು ಇದೇ ಮೊದಲಬಾರಿಗೆ ಕೇಳುತ್ತಿದ್ದೇನೆ. ನಾನು ಜೀವಾತ್ಮನಾದರೆ ಆತ್ಮಯಾರು? ಪರಮಾತ್ಮಯಾರು?

**ಶಂಖುದತ್ತ :** ಪರಮಾತ್ಮನೇ ಪ್ರಪಂಚವೆಲ್ಲದಕ್ಕು ದೇವರು. ಇನ್ನು ಆತ್ಮ ವಿಷಯ ಯಾರಿಗು ತಿಳಿದಿಲ್ಲ. ಶರೀರದಲ್ಲಿ ಎಲ್ಲ ಕೆಲಸಗಳನ್ನು ಮಾಡುವುದು ಜೀವಾತ್ಮನಾದ ನೀನಲ್ಲ. ಯಾರಿಗು ಅರ್ಥವಾಗದಂತೆ, ಯಾರಿಗು ತಿಳಿಯದಂತೆ ಎಲ್ಲ ಕೆಲಸಗಳು ಮಾಡುವುದು ಶರೀರದಲ್ಲಿ ಎಲ್ಲಾಕಡೆಗಿರುವ ಆತ್ಮವೆ. ಆತ್ಮ ಎಲ್ಲ ಕೆಲಸಗಳು ಮಾಡುತ್ತಿದ್ದರೆ ಜೀವಾತ್ಮ ತಾನೇ ಎಲ್ಲ ಕೆಲಸಗಳು ಮಾಡುವಂತೆ ಭ್ರಮಿಸುತ್ತದೆ. ಆದ್ದರಿಂದ ಪ್ರತಿ ಮನುಷ್ಯನಿಗೆ ಆತ್ಮ ಜ್ಞಾನ ಅವಶ್ಯಕ ಎಂದಿದ್ದಾರೆ ಹಿರಿಯರು. ಮೊದಲು ಆತ್ಮವನ್ನು ತಿಳಿಯುವುದಾದರೆ ಅದರೊಳಗಿರುವ ಜೀವಾತ್ಮನಾದ ತನ್ನನ್ನು ತಿಳಿದುಕೊಳ್ಳಬಹುದು. ಆತ್ಮ ಜೀವಾತ್ಮಗಳನ್ನು ತಿಳಿದುಕೊಂಡ ನಂತರ ದೇವರಾದ ಪರಮಾತ್ಮನನ್ನು ತಿಳಿದುಕೊಳ್ಳಲು ಅವಕಾಶ

ವಿರುತ್ತದೆ. ಪರಮಾತ್ಮವನ್ನು ತಿಳಿಯುವುದಕ್ಕೆ ಮೊದಲು ಆತ್ಮ ಜೀವಾತ್ಮಗ ಳನ್ನು ಕುರಿತು ತಿಳಿದುಕೊಳ್ಳಬೇಕು.

**ಸುವರ್ಣ ರಾಜ :** ಒಂದು ಶರೀರದಲ್ಲಿ ಒಂದು ಜೀವಾತ್ಮವಿರುತ್ತದೆ. ಹಾಗೆ ಒಂದು ಆತ್ಮ ಒಂದು ಪರಮಾತ್ಮ ಇರುತ್ತದಾ? ಹತ್ತು ಶರೀರಗಳಲ್ಲಿ ಹತ್ತು ಜೀವಾತ್ಮಗಳಿರುತ್ತವೆ ಅಲ್ಲವೆ! ಹಾಗೆ ಹತ್ತು ಆತ್ಮಗಳು, ಹತ್ತು ಪರಮಾತ್ಮ ಗಳಿರುತ್ತವಾ?

**ಶಂಖುದತ್ತು :** ಇದು ಬಹಳ ಒಳ್ಳೆಯ ಪ್ರಶ್ನೆ. ಇದರ ಉತ್ತರ ಪ್ರತಿಯೊಬ್ಬರಿಗು ಅವಶ್ಯಕ. ಒಂದು ಶರೀರದಲ್ಲಿ ಒಂದು ಜೀವಾತ್ಮ ಇರುವುದು ವಾಸ್ತವವೆ ಹಾಗೆ ಒಂದು ಶರೀರದಲ್ಲಿ ಒಂದು ಆತ್ಮ ಇರುವುದು ಸಹ ಸತ್ಯ. ಹತ್ತು ಶರೀರಗಳಲ್ಲಿ ಹತ್ತು ಜೀವಾತ್ಮಗಳು, ಹತ್ತು ಆತ್ಮಗಳು ಇವೆ ಆದರೆ ಹತ್ತು ಶರೀರಗಳಲ್ಲಿಯು ಪರಮಾತ್ಮ ಮಾತ್ರ ಅಖಂಡವಾಗಿ ಒಂದಾಗಿಯೆ ಇದೆ. ಆದ್ದರಿಂದ ಎಷ್ಟು ಶರೀರಗಳಿದ್ದರೆ ಅಷ್ಟು ಜೀವಾತ್ಮಗಳು ಆತ್ಮಗಳಿರಬಹುದು ಆದರೆ ಪರಮಾತ್ಮ ಮಾತ್ರ ಒಬ್ಬನೇಯೆಂದು ತಿಳಿದುಕೊಳ್ಳಬೇಕು. **ಅಖಂಡವಾಗಿ ಎಲ್ಲಾಕಡೆ ಏಕರೂಪವಾಗಿರುವುದು ಪರಮಾತ್ಮ. ಖಂಡ ಖಂಡಗಳಾಗಿರುವುದು ಆತ್ಮ. ಭಿನ್ನ ಭಿನ್ನವಾಗಿ ಬೇರೆ ಬೇರೆಯಾಗಿರುವವು ಜೀವಾತ್ಮಗಳು**. ಎಷ್ಟು ಜೀವಾತ್ಮಗಳಿರುತ್ತವೋ ಅಷ್ಟು ಆತ್ಮಗಳಿರುತ್ತವೆ. ಭಿನ್ನ ಶರೀರದಲ್ಲಿ ಆತ್ಮಗಳಿದ್ದರೂ ಎಲ್ಲ ಆತ್ಮಗಳು ಒಂದೇ ಸೂತ್ರಕ್ಕೆ ಸಂಬಂಧಿಸಿವೆ. ಆದ್ದರಿಂದ ಆತ್ಮ ಸ್ವರೂಪಗಳು ಎಷ್ಟು ಇದ್ದರು ಎಲ್ಲವನ್ನು ಸೇರಿಸಿ ಆತ್ಮ ಅನ್ನುತ್ತಿದ್ದೇವೆ. ಜೀವಾತ್ಮಗಳು ಅನೇಕ ವಿಧ ಕರ್ಮಗಳಿಂದ ಕೂಡಿಕೊಂಡಿವೆ. ಆದ್ದರಿಂದ ಎಲ್ಲವನ್ನು ಬೇರೆ ಬೇರೆಯಾಗಿ ಹೇಳುತ್ತಿದ್ದೇವೆ.

**ಸುವರ್ಣರಾಜ :** ಜೀವಾತ್ಮಕ್ಕೆ ಆಕಾರವಿದೆಯಾ?

**ಶಂಖುದತ್ತು :** ಜೀವಾತ್ಮಕ್ಕೆ ಜೀವಾತ್ಮ ಎಂದು ಹೆಸರು ಇದೆ, ಆಕಾರ ಇದೆ. ಹಾಗೆ ಆತ್ಮಕ್ಕು ಆತ್ಮ ಎಂದು ಹೆಸರಿದೆ, ಆಕಾರವಿದೆ. ಪರಮಾತ್ಮಕ್ಕೆ ಹೆಸರಿಲ್ಲ, ಆಕಾರವೂ ಇಲ್ಲ. ಜೀವಾತ್ಮ ಆತ್ಮಗಳು ಖಂಡ ಖಂಡಗಳಾಗಿ ಇವೆ ಆದ್ದರಿಂದ

ಅವುಗಳಿಗೆ ಹೆಸರು ಆಕಾರವಿದೆ. ಅಖಂಡವಾದ ಪರಮಾತ್ಮಕ್ಕೆ ಹೆಸರಾಗಲಿ, ಆಕಾರವಾಗಲಿ ಇಲ್ಲ.

**ಸುವರ್ಣರಾಜ :** ಆಕಾರವಿರುವ ಜೀವಾತ್ಮವನ್ನು ಆತ್ಮವನ್ನು ನೋಡಬಹುದಲ್ಲವೆ!

**ಶಂಖುದತ್ತು :** ಆಕಾರವಿದ್ದಷ್ಟು ಮಾತ್ರಕ್ಕೆ ಇವುಗಳನ್ನು ನೋಡುವುದಕ್ಕೆ ಅವಕಾಶವಿಲ್ಲ. ಬಾಹ್ಯ ಕಣ್ಣಿಗೆ ಬಾಹ್ಯ ದೃಷ್ಟಿಗೆ ಆತ್ಮ ಗೋಚರಿಸುವುದಿಲ್ಲ. ಆತ್ಮ ಗೋಚರಿಸದೆ ಅದರೊಳಗಿನ ಜೀವಾತ್ಮ ಸಹ ಕಾಣಿಸದು. ಆತ್ಮವನ್ನು ಒಂದು ಜ್ಞಾನ ದೃಷ್ಟಿ ಮುಖಾಂತರ ನೋಡಬಹುದು. ಆತ್ಮವನ್ನು ಜ್ಞಾನ ನೇತ್ರದ ಮೂಲಕ ನೋಡಿದವನು ಅದೇ ವಿಧವಾಗಿಯೆ ಆತ್ಮದೊಳಗಿರುವ ಜೀವಾತ್ಮನನ್ನು ನೋಡಬಹುದು. ಆತ್ಮ ಇಂದ್ರಿಯಾತೀತವಾದರು ಜ್ಞಾನಕ್ಕೆ ಅತೀತವಾದುದಲ್ಲ.

**ಸುವರ್ಣರಾಜ :** ಜ್ಞಾನ ದೃಷ್ಟಿಯಿಂದ ಪರಮಾತ್ಮನ ವಿಶ್ವರೂಪವನ್ನು ಅರ್ಜುನನು ನೋಡಿದಂತೆ ಕೇಳಿದ್ದೇವೆ. ಅಲ್ಲ ಎನ್ನುತ್ತೀರಾ?

**ಶಂಖುದತ್ತ :** ವಾಸ್ತವವೇ. ಅದು ಅರ್ಜುನನಿಗೆ ಇದ್ದ ಜ್ಞಾನ ದೃಷ್ಟಿಯಲ್ಲ. ಸ್ವತಃವಾಗಿ ಪರಮಾತ್ಮವೆ ಕೊಟ್ಟ ಜ್ಞಾನ ದೃಷ್ಟಿಯಿಂದ ಆತನು ನೋಡಿದ್ದಾನೆ. ಅದು ದೇವರ ಆಜ್ಞೆ ಪ್ರಕಾರ ಕಾಣಿಸಿದ ದೃಶ್ಯ. ಅದು ಒಬ್ಬ ಅರ್ಜುನನಿಗೆ ಮಾತ್ರ ಅವಕಾಶ ಸಿಕ್ಕಿದೆ. ಅದರ ನಂತರವಾಗಲಿ ಅದಕ್ಕಿಂತ ಮೊದಲಾಗಲಿ ಯಾರಿಗು ಪರಮಾತ್ಮ ದರ್ಶನವಾಗಿಲ್ಲ. ಪರಮಾತ್ಮ ಮಾನವನ ಜ್ಞಾನ ದೃಷ್ಟಿಗು ಸಹ ಕಾಣಿಸುವವನಲ್ಲ. ಅರ್ಜುನನ ಹಾಗೆ ನೋಡಬೇಕೆಂದರೆ ಅದು ಪರಮಾತ್ಮ ಕೊಡುವ ಜ್ಞಾನ ದೃಷ್ಟಿಯಿಂದ ಮಾತ್ರ ಸಾಧ್ಯ. ಅಂತಹ ಅವಕಾಶ ಅರ್ಜುನನಿಗೆ ಹೊರತು ಬೇರೆ ಯಾರಿಗು ಬರಲಿಲ್ಲ, ಬರುವುದು ಇಲ್ಲ.

**ಸುವರ್ಣ ರಾಜ :** ಸ್ವಾಮಿ! ಮನುಷ್ಯರಲ್ಲಿ ಸ್ತ್ರೀ ಎಂದು, ಪುರುಷನೆಂದು ಬೇರೆ ಬೇರೆ ಶರೀರಗಳಿವೆಯಲ್ಲವೆ! ಹಾಗೆ ಸ್ತ್ರೀ ಆತ್ಮವೆಂದು, ಪುರುಷ ಆತ್ಮವೆಂದು ಬೇರೆ ಬೇರೆಯಾಗಿರುತ್ತವಾ?

**ಶಂಖುದತ್ತು :** ಹಾಗೆ ಇರುವುದಕ್ಕೆ ಅವಕಾಶವಿಲ್ಲ. ಶರೀರಗಳಿರುವಂತೆ ಸ್ತ್ರೀ ಪುರುಷ ಆತ್ಮಗಳಾಗಲಿ, ಜೀವಾತ್ಮಗಳಾಗಲಿ ಇರುವುದಿಲ್ಲ. ಶರೀರಗಳು ಯಾವಾದರು ಆತ್ಮಗಳ ವಿಧಾನ ಒಂದಾಗಿಯೆ ಇರುತ್ತದೆ. ಇನ್ನೂ ವಿವರವಾಗಿ ಹೇಳಿಕೊಂಡರೆ ಆತ್ಮಗಳು ಪುರುಷ ಸಂಬಂಧವಾದವುಗಳೆಂದು, ಶರೀರಗಳು ಸ್ತ್ರೀ ಸಂಬಂಧವಾದವುಗಳೆಂದು ಹಿರಿಯರು ವಿಭಜಿಸಿದ್ದಾರೆ. ಪಂಚಭೂತಗಳಾದ ಪ್ರಕೃತಿಯೆಲ್ಲವೂ ಸ್ತ್ರೀ ಸ್ವರೂಪವೆಂದು, ಪ್ರಕೃತಿ ವಿನಹ ಉಳಿದಿರುವ ಮೂರು ಆತ್ಮಗಳು ಪುರುಷ ಸ್ವರೂಪವೆಂದು ಸಹ ಹೇಳಿದ್ದಾರೆ.

**ಸುವರ್ಣರಾಜ :** ಆತ್ಮಗಳು ಮೂರು ಇರುವಾಗ ಈ ಕಡೆ ಪರಮಾತ್ಮನನ್ನು ಬಿಟ್ಟು ಆ ಕಡೆ ಜೀವಾತ್ಮನನ್ನು ಬಿಟ್ಟು ಮಧ್ಯದಲ್ಲಿ ಆತ್ಮವನ್ನು ಹಿಡಿದುಕೊಂಡು ಆತ್ಮಜ್ಞಾನ ಎಂದಿದ್ದೀರ. ಪರಮಾತ್ಮ ಜ್ಞಾನವೆಂದು, ಜೀವಾತ್ಮ ಜ್ಞಾನವೆಂದು ಎಲ್ಲಿಯು ಅನ್ನಲಿಲ್ಲ ಏಕೆ?

**ಶಂಖುದತ್ತ :** ಮಾನವನು ಮುಖ್ಯವಾಗಿ ತಿಳಿದುಕೊಳ್ಳಬೇಕಾಗಿರುವುದು ಮಧ್ಯದಲ್ಲಿರುವ ಆತ್ಮ ಜ್ಞಾನವನ್ನೇ, ಆತ್ಮ ಜ್ಞಾನ ತಿಳಿಯದೇ ಆತ್ಮದೊಳಗಿರುವ ಜೀವಾತ್ಮ ಜ್ಞಾನ ತಿಳಿಯುವುದಿಲ್ಲ. ಹಾಗೆ ಆತ್ಮಜ್ಞಾನ ತಿಳಿಯದೇ ಆತ್ಮಕ್ಕಿಂತ ದೊಡ್ಡದಾದ ಪರಮಾತ್ಮ ಜ್ಞಾನ ಅರ್ಥವಾಗದು. ಆದ್ದರಿಂದ ಮೊದಲ ಮೂರು ಆತ್ಮಗಳ ಮಧ್ಯದಲ್ಲಿರುವ ಆತ್ಮವನ್ನೇ ತಿಳಿದುಕೊಳ್ಳಬೇಕೆಂದಿದ್ದಾರೆ. ಈ ವಿಧಾನವನ್ನು ತಿಳಿಸುವುದಕ್ಕೆ ಈಶ್ವರಲಿಂಗದ ಮೇಲೆ ಮೂರು ವಿಭೂತಿರೇಖೆಗಳಲ್ಲಿ ಮಧ್ಯದಲ್ಲಿರುವುದಕ್ಕೆ ಬೊಟ್ಟನ್ನು ಇಟ್ಟಿದ್ದಾರೆ. ಮೂರು ವಿಭೂತಿ ರೇಖೆಗಳು ಪರಮಾತ್ಮ, ಆತ್ಮ, ಜೀವಾತ್ಮಗಳೆಂದು ಅವುಗಳ ಮಧ್ಯೆದಲ್ಲಿರುವ ರೇಖೆಗೆ ಇದನ್ನೆ ಮೊದಲು ತಿಳಿದುಕೊಳ್ಳಬೇಕೆಂದು ಕುಂಕುಮಬೊಟ್ಟನ್ನಿಟ್ಟಿದ್ದಾರೆ.

**ಸುವರ್ಣ ರಾಜ :** ಆತ್ಮಗಳಿಗೆ ಬಣ್ಣ ಏನಾದರೂ ಇದೆಯಾ?

**ಶಂಖುದತ್ತ :** ಆತ್ಮಗಳಿಗೆ ಬಣ್ಣವಿಲ್ಲ. ಆದರೂ ಅವುಗಳನ್ನು ಬಿಳಿಬಣ್ಣದಿಂದ ವಿಭೂತಿ ರೇಖೆಗಳಂತೆ ತಿದ್ದಿದ್ದಾರೆ. ಪರಮಾತ್ಮದಲ್ಲಿ ಆತ್ಮ, ಆತ್ಮದಲ್ಲಿ ಜೀವಾತ್ಮ

ಒಳಗೊಂಡಿವೆ ಆದ್ದರಿಂದ ವಿಭೂತಿ ರೇಖೆಗಳಲ್ಲಿ ಮೇಲಿನ ರೇಖೆ ಪರಮಾತ್ಮ ಎಂದು ಮಧ್ಯದಲ್ಲಿರುವುದು ಆತ್ಮವೆಂದು, ಕೆಳಗಿರುವುದು ಜೀವಾತ್ಮ ಎಂದು ತಿಳಿಯಬೇಕು.

**ಸುವರ್ಣ ರಾಜ :** ಮೋಕ್ಷ ಎಂದರೇನು?

**ಶಂಖುದತ್ತ :** ಮೋಕ್ಷ ಎಂದರೆ ಬಿಡುಗಡೆ ಎಂದು ಅರ್ಥ. ಜೀವಾತ್ಮನು ಕರ್ಮಗಳೆಂಬ ಬಂಧಗಳಿಂದ ಬಿಡುಗಡೆ ಹೊಂದುವುದೆ ಮೋಕ್ಷ.

**ಸುವರ್ಣರಾಜ :** ಮೋಕ್ಷ ಹೊಂದುವುದಕ್ಕೆ ಆತ್ಮ ಜ್ಞಾನ ತಪ್ಪದೆ ಅವಶ್ಯಕವೇ ಅಲ್ಲವೆ?

**ಶಂಖುದತ್ತ :** ಹೌದು ಮೋಕ್ಷ ಹೊಂದುವ ಪ್ರಯತ್ನಕ್ಕಾಗಿ ಆತ್ಮಜ್ಞಾನ ತಪ್ಪದೇ ಅವಶ್ಯ.

**ಸುವರ್ಣ ರಾಜ :** ನೀವು ಮೋಕ್ಷ ಹೊಂದುವುದಕ್ಕೆ ಪ್ರಯತ್ಮ ಮಾಡುತ್ತ ಆತ್ಮಜ್ಞಾನ ಹೊಂದಿದ್ದೀರ. ಅಂತಹ ಪರಿಸ್ಥಿತಿಯಲ್ಲಿ ಮೋಕ್ಷ ಹೊಂದಿದರೆ ಒಂದು ಮೇಲು ಹೊಂದದೆ ಹೋದರೆ ಎರಡು ಮೇಲು ಎಂದಿದ್ದೀರ. ಹೊಂದಿದರೆ ಒಂದು ಲಾಭ ಏನು? ಹೊಂದದೆ ಹೋದರೆ ಎರಡು ಲಾಭ ಏನು?

**ಶಂಖುದತ್ತ :** ಈ ವಿಷಯ ಹೇಳುವುದಕ್ಕೇ ನಿನಗೆ ಸ್ವಲ್ಪ ಆತ್ಮಜ್ಞಾನ ಹೇಳಬೇಕಾಗಿ ಬಂದಿದೆ. ಈಗ ಉತ್ತರ ಹೇಳಿದರು ಅರ್ಥಮಾಡಿಕೊಳ್ಳುತ್ತೀಯ. ಆತ್ಮಜ್ಞಾನ ತಿಳಿಯದ ಮೊದಲು ಮೋಕ್ಷ ಬಾರದೆ ಹೋದರೆ ಹೆಚ್ಚಿನ ಲಾಭ, ಬಂದರೆ ಕಡಿಮೆ ಲಾಭ ಎನ್ನುವಂತೆ ಅರ್ಥವಾಗುತ್ತಿದೆ. ನಾನು ಮೋಕ್ಷ ಬಂದರೆ ಪರಮಾತ್ಮ ಅನ್ನುವುದು ಒಂದೇ ತಿಳಿಯುತ್ತದೆ ಎಂಬ ಭಾವದಿಂದ ಆ ದಿನ ಹೇಳಿದ್ದೆನು. ಆತ್ಮಜ್ಞಾನ ತಿಳಿಯುವುದರಿಂದ ಮೋಕ್ಷ ಬಾರದೆಹೋದರು ಆತ್ಮ ಜೀವಾತ್ಮ ಎರಡು ತಿಳಿಯುವವು ಆದ್ದರಿಂದ ಎರಡು ತಿಳಿಯುವವೆಂಬ ಭಾವದಿಂದ ಎರಡು ಮೇಲು ಎಂದು ಹೇಳಿದೆನು. ಆತ್ಮಜ್ಞಾನದಿಂದ ಎರಡು ಆತ್ಮಗಳು

ತಿಳಿದ ನಂತರ ಮೂರನೇ ಆತ್ಮ ತಿಳಿಯುತ್ತದೆ. ಮೋಕ್ಷ ಹೊಂದದೆ ಮೂರನೆ ಆತ್ಮ ತಿಳಿದರೆ ಮೂರು ಲಾಭವೆನ್ನುತ್ತಿದ್ದೆನು. ಮೋಕ್ಷ ಹೊಂದಿದವನು ಇಹದೊಳಗೆ ಇರುವುದಿಲ್ಲ ಆದ್ದರಿಂದ ಅವನಿಗೆ ಎಲ್ಲವೂ ಒಂದೇ ಆತ್ಮ ಆಗುತ್ತದೆ ಆದ್ದರಿಂದ ಮೋಕ್ಷ ಹೊಂದಿದವನಿಗೆ ಒಂದು ಮೇಲು ಅನ್ನಬೇಕಾಗಿ ಬಂದಿತು. ಇಹದೊಳಗೆ ಆತ್ಮಜ್ಞಾನಿ ಎರಡು ಆತ್ಮಗಳನ್ನು ತಿಳಿದವನಾದ್ದರಿಂದ ಅವನಿಗೆ ಮೋಕ್ಷ ಹೊಂದದೆ ಹೋದರೆ ಎರಡು ಮೇಲು ಅನ್ನಬೇಕಾಗಿ ಬಂದಿತು. ಒಂದು ಎಂದರೆ ಪರಮಾತ್ಮ ಎಂದು, ಎರಡು ಎಂದರೆ ಆತ್ಮ ಜೀವಾತ್ಮ ಎಂದು ತಿಳಿಯಬೇಕು. ಆದರೆ ಒಂದು ಲಾಭ ಆಗದೆ ಹೋದರೆ ಎರಡು ಲಾಭ ಎಂಬ ಮಾತು ಸಹ ಈ ಅರ್ಥದಿಂದ ಕೂಡಿಕೊಂಡಿರುವುದೇ ಆಗಿದೆ. ಆಗಿನ ನನ್ನ ಮಾತು ಈ ದಿನ ಅರ್ಥವಾಗಿದೆಯೆಂದುಕೊಳ್ಳುತ್ತೇನೆ. ಈ ಮಾತು ಆತ್ಮಜ್ಞಾನ ತಿಳಿದವರಿಗೇ ಅರ್ಥವಾಗುತ್ತದೆ. ಪ್ರಪಂಚ ಜ್ಞಾನದಲ್ಲಾದರೆ ಅಂದರೆ ಕೆಲಸ ನಡೆದರೆ ಕಡಿಮೆಲಾಭ, ನಡೆಯದೆ ಹೋದರೆ ಹೆಚ್ಚಿನ ಲಾಭ ಅನ್ನುವಂತಿರುತ್ತದೆ. ಆತ್ಮ ಜ್ಞಾನರೀತ್ಯಾ ಆದರೆ ಅಂದರೆ ಕೆಲಸ ನಡೆದರೆ ಹೆಚ್ಚಿನ ಲಾಭ, ನಡೆಯದೆ ಹೋದರೆ ಕಡಿಮೆ ಲಾಭ ಅನ್ನುವಂತಿರುತ್ತದೆ. ಒಂದೇ ವಾಕ್ಯ ಪ್ರಪಂಚ ಪರವಾಗಿ ಒಂದು ಭಾವ, ಆತ್ಮಜ್ಞಾನ ಪರವಾಗಿ ಒಂದು ಭಾವ ಕಲ್ಪಿಸುತ್ತದೆ. ಮೊದಲು ಕೇಳಿದಾಗ ಒಂದು ಭಾವದಲ್ಲಿ ಅರ್ಥವಾದ ವಾಕ್ಯ ನಿನಗೆ ಈಗ ಬೇರೆ ವಿಧದಲ್ಲಿ ಅರ್ಥವಾಗಿರುತ್ತದೆ. ಇದೇ ಜ್ಞಾನದವೊಂದು ಪ್ರತ್ಯೇಕತೆ.

**ಸುವರ್ಣರಾಜ :** ವಾಸ್ತವವೆ ಸ್ವಾಮಿ. ಮೊದಲು ನೀವು ಹೇಳಿದ ದಿನ ನನಗೆ ಮೋಕ್ಷ ಬಾರದೆ ಹೋದರೆ ಹೆಚ್ಚಿನ ಮೇಲಾಗುತ್ತದೇನೋ ಎಂದು ಅಂದು ಕೊಂಡಿದ್ದೆನು. ಆ ದಿನ ನನ್ನ ಪ್ರಪಂಚಜ್ಞಾನ ಹಾಗೆ ಅನಿಸುವಂತೆ ಮಾಡಿತು. ವಾಸ್ತವವಾಗಿ ಜ್ಞಾನ ಪರವಾಗಿ ಎಷ್ಟೋ ಜ್ಞಾನವಿರುವ ವಾಕ್ಯವೆಂದು ಈ ದಿನ ಅರ್ಥವಾಯಿತು.

**ಶಂಖುದತ್ತ :** ಈ ವಾಕ್ಯದವೊಂದು ವಿವರ ಹೇಳುವುದಕ್ಕೆ ನಾನು ಇಷ್ಟು ದೂರ ಬಂದು ನಿನಗೆ ಆತ್ಮಜ್ಞಾನ ಹೇಳಬೇಕಾಗಿ ಬಂದಿತು. ಆ ದಿನ ಕಾಡಿನಲ್ಲಿ ನಿನಗೆ

ಈ ವಾಕ್ಯ ಅರ್ಥವಾಗದು ನಂತರ ಬಂದು ಹೇಳುವೆನೆಂದು ಹೇಳಿದ್ದೆನು. ಇನ್ನು ನಾನು ಬಂದ ಕೆಲಸ ಮುಗಿಯಿತು, ನಾನು ಹೋಗಿ ಬರುತ್ತೇನೆ. ನಿನಗೆ ಇನ್ನೂ ಆತ್ಮಜ್ಞಾನದ ಅವಶ್ಯಕತೆ ಬಂದರೆ ಕಾಡಿಗೆ ಬಂದು ತಿಳಿದುಕೋ.

ಈ ವಿಧವಾಗಿ ಶಂಖುದತ್ತನು ಸುವರ್ಣರಾಜನಿಗೆ ಜ್ಞಾನ ತಿಳಿಸಿ ಅಲ್ಲಿಂದ ಹೊರಟು ಕಾಡಿನ ಮಧ್ಯದೊಳಗೆ ಹೋಗಿ ಮೋಕ್ಷಸಾಧನೆ ಮಾಡುತ್ತಿದ್ದನು. ಸುವರ್ಣ ಮಹಾರಾಜ ತನ್ನ ರಾಜ್ಯವನ್ನು ತನ್ನ ಕುಮಾರನಿಗೆ ಒಪ್ಪಿಸಿ ತಾನು ಸಹ ಮೋಕ್ಷ ಸಾಧನೆಗಾಗಿ ಶಂಖುದತ್ತನೊಂದಿಗೆ ಸೇರಿ ಜೀವಿಸತೊಡಗಿದನು.

# ಬೇತಾಳನ ಕಥೆ

ಒಂದಾನೊಂದು ಕಾಲದಲ್ಲಿ ಒಬ್ಬ ತಂದೆ. ಆ ತಂದೆಗೆ 16 ಜನ ಗಂಡು ಮಕ್ಕಳು ಬಹಳ ಮಂದಿ ಅಂದುಕೊಳ್ಳುವುದಕ್ಕೆ ಅವರೆಲ್ಲ ಒಂದೇ ಹೆಂಡತಿಗೆ ಹುಟ್ಟಿದವರಲ್ಲ. ಮೊದಲು ಹೆಂಡತಿ ಒಬ್ಬಳೆ ಇದ್ದಳು. ಕೊನೆಗೆ ನಾಲ್ವರಾದರು. ನಾಲ್ಕು ವಿಧಗಳ ಹೆಂಡತಿಯರಿಗೆ ನಾಲ್ಕು ವಿಧಗಳ ಮಕ್ಕಳು. ಒಬ್ಬೊಬ್ಬರಿಗೆ ನಾಲ್ಕು ಜನ ಹುಟ್ಟಿದ್ದಾರೆ. ಹೇಗಾದರೇನು ಒಟ್ಟು ಹದಿನಾರು ಜನ ಗಂಡು ಮಕ್ಕಳು ಹುಟ್ಟಿದ್ದಾರೆ. ಮೊದಲ ಹೆಂಡತಿ ಹಿರಿಯರಿಂದ ಮದುವೆ ಮಾಡಿಕೊಂಡು ಬಂದಿರುವವಳಾದರೆ, ಉಳಿದ ಹೆಂಡತಿಯರು ಹಾಗೆ ಅಲ್ಲವೆಂದು ಕೊಳ್ಳಿ. ಮೊದಲೇ ಇನ್ನೊಬ್ಬರನ್ನು ಮದುವೆ ಮಾಡಿಕೊಂಡು ಬೇರೊಬ್ಬರಿಗೆ ಹೆಂಡತಿಯರಾಗಿ ಆ ಗಂಡಂದಿರಿಂದ ಅವರಿಗೆ ತೃಪ್ತಿ ಇಲ್ಲದೆ, ಆ ಗಂಡಂದಿರು ಇಷ್ಟವಾಗದೆ ಅವರಿಂದ ಬಿಟ್ಟುಹೋಗಿ ಗಂಡಂದಿರಿಲ್ಲದೆ ಸ್ವಲ್ಪಕಾಲ ತಿರುಗಿ ಕೊನೆಗೆ ಈತನ ಬಳಿಗೆ ಬಂದು ಸೇರಿದ್ದಾರೆ. ಹೇಗಾದರೇನು ಕೊನೆಗೆ ನಾಲ್ಕು ಕುಲದವರು ನಾಲ್ವರು ಹೆಂಡತಿಯರಾದರು. ಹೆಂಡತಿಗೆ ನಾಲ್ವರಂತೆ ಹದಿನಾರು ಜನ ಗಂಡು ಮಕ್ಕಳಾದರು.

ಮಕ್ಕಳೆಲ್ಲರಿಗು ಯುಕ್ತ ವಯಸ್ಸು ಬಂದಿತು. ಯುಕ್ತವಯಸ್ಸು ಬಂದ ಕೂಡಲೇ ಅವರ ತಂದೆ ಎಲ್ಲರಿಗು ಸಮಾನವಾಗಿ ಆಸ್ಥಿ ಹಂಚಿಟ್ಟನು. ಚಿಕ್ಕವರಿಗೆ ಸ್ವಲ್ಪ ಹೆಚ್ಚು ದೊಡ್ಡವರಿಗೆ ಸ್ವಲ್ಪ ಕಡಿಮೆ ಮಾಡದಂತೆ ಎಲ್ಲರಿಗು ಸಮಾನವಾಗಿ ಹಂಚಿದನು. ಆ ತಂದೆ ಹಂಚಿಕೊಟ್ಟ ಆಸ್ಥಿಯಿಂದ ಎಲ್ಲರು ಸಂತೃಪ್ತಿಪಟ್ಟರು. ಎಂತಹ ಅಸಂತೃಪ್ತಿ ಇಲ್ಲ. ಏಕೆಂದರೆ ಯಾವ ತಂದೆಯಾಗಲಿ ಯಾವ ಮಕ್ಕಳಿಗು ಹಂಚದ ಬೆಲೆಯುಳ್ಳ ಆಸ್ಥಿಯನ್ನು ಆ ತಂದೆ ಆ ಮಕ್ಕಳಿಗೆ ಹಂಚಿದನು. ಹಂಚಿದ ಆಸ್ಥಿ ಮಾಮೂಲು ಭೂಮಿಗಳೆ ಅಲ್ಲದೆ ಬೆಲೆ ಕಟ್ಟಲಾಗದಂತಹ ವಜ್ರವೈಡೂರ್ಯಗಳು, ರತ್ನಗಳಿಂದ ಕೂಡಿಕೊಂಡ ಬಂಗಾರದ ಆಭರಣಗಳು. ಆ ಮಕ್ಕಳೆ ನನ್ನ ಹತ್ತಿರ ಯಾರ ಹತ್ತಿರವಿಲ್ಲದ ರತ್ನಗಳು ವಜ್ರಗಳಿವೆಯೆಂದು ಹೇಳಿಕೊಂಡರು. ತಂದೆಯು ಸಹ ಮಕ್ಕಳನ್ನು ಆಪ್ಯಾಯತೆಯಿಂದ ಬೆಳೆಸಿ ಯಾರಿಗು ಕಡಿಮೆ ಇಲ್ಲದಂತೆ ನಮ್ಮ ತಂದೆ ದೊಡ್ಡವನೆನ್ನುವಂತೆ ಮಾಡಿದ್ದನು.

ಒಂದು ದಿನ ಆ ತಂದೆಗೆ ಒಂದು ವ್ಯಾಧಿ ಬಂದಿತು. ಆ ರೋಗ ಬೆಳೆಯುತ್ತಾ ಹೋಯಿತು. ಆ ವ್ಯಾಧಿಯಿಂದ ಆ ತಂದೆ ಬದುಕುವುದಿಲ್ಲವೆಂದು ಕೊನೆಗೆ ಸಾವು ತಪ್ಪುವುದಿಲ್ಲವೆಂದು ಮಕ್ಕಳಿಗೆ ತಿಳಿಯಿತು. ಆ ವ್ಯಾಧಿಯಿಂದ ಆತನೊಬ್ಬನೆ ಸತ್ತರೆ ಪರವಾಗಿಲ್ಲ. ಆ ವ್ಯಾಧಿ ನಮಗೆಲ್ಲಿ ಅಂಟಿಕೊಳ್ಳುತ್ತದೊ ಎಂದು ಭಯಪಟ್ಟರು. ತಂದೆಯಲ್ಲವೆ ಎಂದಾಗಲಿ, ಆತನ ಆಸ್ಥಿ ಹಂಚಿಕೊಂಡಿದ್ದೇವಲ್ಲ ಎಂದಾಗಲಿ, ಒಬ್ಬನನ್ನೆ ಬಿಟ್ಟು ಹೋದರೆ ಹೇಗೆ ಎಂದಾಗಲಿ ಯೋಚಿಸದ ಮಕ್ಕಳು ಯಾರ ದಾರಿಯನ್ನು ಅವರು ನೋಡಿಕೊಂಡರು. ಮೊದಲನೆ ಹೆಂಡತಿ ಮಕ್ಕಳಲ್ಲಿ ಇಬ್ಬರು ಮಾತ್ರ ಹೇಗಾಗುತ್ತದೊ ಹಾಗೆ ಆಗಲಿ ಎಂದು ತಂದೆಯಹತ್ತಿರ ವಿರುವಾಗ ಉಳಿದ 14 ಜನ ತಂದೆಗೆ ದೂರವಾಗಿ ಹೋದರು. ತಂದೆಯನ್ನು ಬಿಟ್ಟು ಹೋಗುವುದು ತಪ್ಪು ಅಲ್ಲವೆ! ಎಂದು ಇತರರನ್ನುತ್ತಾರೆಂದು ಅವರ ತಪ್ಪು ಹೊರಬೀಳದಂತೆ ನಾವು ಒಳ್ಳೆಯವರು ನಮ್ಮ ತಂದೆಯೆ ಕೆಟ್ಟವನೆಂದು, ಆತನೆ ಹೊರಹಾಕಿದ್ದಾನೆಂದು, ಕೆಲವರು ಮಕ್ಕಳು ಹೇಳಿದರೆ ಮತ್ತೆ ಕೆಲವರೇನೋ ನಮ್ಮ ತಂದೆಯದು ಕೆಟ್ಟ ಪ್ರವರ್ತನೆ ಎಂದು ನಮ್ಮನ್ನು ಭೇದವಾಗಿ ನೋಡುತ್ತಿದ್ದಾ

ನೆಂದು, ಆಸ್ಥಿ ಸರಿಯಾಗಿ ಹಂಚಲಿಲ್ಲವೆಂದು, ನನ್ನ ಹೆಂಡತಿಗೆ ನಮ್ಮ ತಂದೆಗೆ ಸರಿಹೋಗುವು ದಿಲ್ಲವೆಂದು, ಹುಡುಗಿಯನ್ನು ಕೊಟ್ಟ ಮಾವನನ್ನು ನಮ್ಮ ತಂದೆ ಸರಿಯಾಗಿ ನೋಡಲಿಲ್ಲವೆಂದು ನಮ್ಮ ಮಾವನಿಗೆ ಕೋಪ ಬಂದಿದೆಯೆಂದು ಹೀಗೆ ಎಲ್ಲ ಕಥೆಗಳು ಪ್ರಚಾರ ಮಾಡಿದರು. ತಂದೆಯ ಬಳಿ ಉಳಿದುಕೊಂಡ ಇಬ್ಬರನ್ನು ಉಳಿದ 14 ಜನರಿಗೆ ಎಲ್ಲಾದರು ಹೊರಗಡೆ ಕಾಣಿಸಿದರೆ ಮಾತನಾಡಿಸುತ್ತಿರಲಿಲ್ಲ. ಮಾತನಾಡಿಸಿದರೆ ಅವರ ತಂದೆಯ ಪೀಡೆ ಎಲ್ಲಿ ಅಂಟಿಕೊಳ್ಳುತ್ತದೊ ಎಂದು ಮುಖ ತಪ್ಪಿಸಿಕೊಳ್ಳುತ್ತಿದ್ದರು. ತಂದೆ ಕಥೆ ಬಿಟ್ಟು ಕಾಣಿಸಿದವರು ಸೋದರರೆಂದು ಸಹ ಅಂದುಕೊಳ್ಳದೆ ನೋಡಿನೋಡದಂತೆ ತಪ್ಪಿಸಿಕೊಂಡು ತಿರುಗುತ್ತಿದ್ದರು. ಒಂದು ವೇಳೆ ಆ ಇಬ್ಬರು ಸೋದರರು ಅವರೇ ಕಾಣಿಸಿಕೊಂಡು ಎಲ್ಲಾದರು ಮಾತನಾಡಿಸಿದರೆ ತಂದೆ ಚೆನ್ನಾಗಿದ್ದಾನಾ ಎಂದು ಸಹ ಕೇಳುವವರಲ್ಲ.

ಆ 14 ಜನ ಮಕ್ಕಳಲ್ಲಿ ಸ್ವಲ್ಪ ಜನ ಆತನು ನಮ್ಮ ತಂದೆಯಲ್ಲವೆಂದು ಸಹ ಹೇಳಿಕೊಂಡಿದ್ದರು. ನಮ್ಮ ಅಮ್ಮನಿಗೆ ಮೊದಲ ಗಂಡನೆ ನಮ್ಮ ತಂದೆಯೆಂದು ಸಹ ಹೇಳಿಕೊಂಡರು. ಹುಟ್ಟಿಸಿಕೊಂಡು ಆಸ್ಥಿ ಕೊಟ್ಟವನನ್ನು ತಂದೆಯಲ್ಲವೆಂದು ವರಸೆಗೆ ಅಪ್ಪನಾದವನನ್ನು ತಂದೆ ಎಂದು ಹೇಳಿಕೊಳ್ಳುವುದು ಆಶ್ಚರ್ಯವೆ ಅಲ್ಲವೆ! ಈ ವಿಧವಾಗಿ ಹೊರಗೆ ಹೋದ ಮಕ್ಕಳಿರುವಾಗ ತಂದೆ ಬಳಿಯಿದ್ದ ಮಕ್ಕಳು ಕೊನೆಗೆ ನಮಗೆ ತಪ್ಪಿದ್ದಲ್ಲವೆಂದು ತಮಗೆ ಕೈಲಾದ ಸೇವೆ ಮಾಡುತ್ತಾ ಇದ್ದರು.

ಬಿಟ್ಟು ಹೋದ 14 ಜನ ವಿಧವಿಧಗಳಲ್ಲಿ ಬದುಕನ್ನು ಸಾಗಿಸುತ್ತಿದ್ದರು. ಅವರ ಅಮ್ಮನವರು ನಾಲ್ಕು ಕುಲದವರೆಂದಿದ್ದೇವೆ ಆದರೆ ಅವರ ಕುಲಗಳ ಹೆಸರುಗಳು ಹೇಳಿಲ್ಲವಲ್ಲ! ಈಗ ಹೇಳಿಕೊಳ್ಳೋಣ. ಹಿರಿಯರ ಸಾಂಪ್ರದಾಯದ ಮೇರೆಗೆ ಮಾಡಿದ ಮದುವೆಯಿಂದ ಬಂದ ಹೆಂಡತಿ ಗಂಡನ ಕುಲವೆ. ಉಳಿದ ಮೂವರಲ್ಲಿ ಒಬ್ಬರು ಬಲಿಜಕುಲಕ್ಕೆ ಸೇರಿದವಳು. ಒಬ್ಬರೇನೊ ನೇಯುವಕುಲ, ಮತ್ತೊಬ್ಬರು ಕ್ಷೌರಿಕ (ಮಂಗಳ) ಕುಲಕ್ಕೆ ಸೇರಿದವಳು. ಆಕೆಗೆ ಹುಟ್ಟಿದವನೊಬ್ಬನು

ತಂದೆ ಕೊಟ್ಟ ಆಸ್ಥಿಯನ್ನು ಬಂಡವಾಳ ಇಟ್ಟು ಅದರಿಂದಲೆ ವ್ಯಾಪಾರ ಮಾಡುತ್ತಾ ತಾನು ಸಹ ತಂದೆಯಷ್ಟು ಆಸ್ಥಿಯನ್ನು ಸಂಪಾದಿಸಬೇಕೆಂದು, ತಂದೆಯ ಮಟ್ಟಕ್ಕೆ ಆಗಬೇಕೆಂದು ಪ್ರಯತ್ನಿಸುತ್ತಿದ್ದನು. ನೇಯುವವಳಿಗೆ ಹುಟ್ಟಿದವನು ತಂದೆ ಕೊಟ್ಟ ಆಸ್ಥಿಯನ್ನು ಬಡ್ಡಿಗೆ ಕೊಟ್ಟು ಇರುವ ಆಸ್ಥಿಯನ್ನು ಎರಡರಷ್ಟು ಮಾಡಿಕೊಳ್ಳಬೇಕೆಂದು ತಂದೆಯನ್ನು ಮೀರಿ ಹೋಗಬೇಕೆಂದು ನೋಡುತ್ತಿದ್ದನು. ಹೀಗೆ ಎಲ್ಲರು ಎಲ್ಲ ವಿಧಗಳಲ್ಲಿ ಬದುಕುತ್ತ ತಂದೆಯನ್ನು ಕುರಿತು ಸ್ವಲ್ಪವಾದರು ಗಮನಿಸುತ್ತಿರಲಿಲ್ಲ.

ಇನ್ನು ತಂದೆ ವಿಷಯಕ್ಕೆ ಬಂದರೆ ತನಗೆಷ್ಟು ವ್ಯಾಧಿ ಬಂದರು ತನ್ನನ್ನೇನು ಮಾಡುವುದಿಲ್ಲವೆಂದು, ತಾನು ಮಾಡಬೇಕಾದ ಕೆಲಸಗಳು ಉಳಿದಿವೆಯೆಂದು ಅವು ಪೂರ್ತಿ ಮಾಡುವವರೆಗು ತನಗೆ ಸಾವು ಇಲ್ಲವೆಂದು ಆ ವಿಷಯ ತಿಳಿಯದ ನನ್ನ ಮಕ್ಕಳು ಅನವಶ್ಯಕವಾಗಿ ಭಯಪಟ್ಟು ಸ್ವಾರ್ಥಗಳಿಂದ ಹೊರಗೆ ಹೋಗಿದ್ದಾರೆಂದು, ಹೋದವರ ಕುರಿತು ನನಗೇನು ಚಿಂತೆಯಿಲ್ಲವೆಂದು, ಹೋದವರೆ ಹೆಂಡತಿಯಿಂದ ಒಬ್ಬರು, ಮಾವನಿಂದ ಒಬ್ಬರು, ಮಕ್ಕಳಿಂದ ಒಬ್ಬರು ವಿಧವಿಧವಾಗಿ ಬಾಧೆ ಬೀಳುತ್ತಿದ್ದಾರೆಂದು, ನನಗಂತಹ ಸಮಸ್ಯೆಗಳು ಇಲ್ಲವೆಂದು ನಿಜವಾಗಿ ಅವರಿಗಿಂತ ನಾನೇ ಸುಖವಾಗಿ ಇದ್ದೇನೆಂದು ಹೇಳುತ್ತಿದ್ದನು. ತಂದೆ ರೋಷ ಛಲ ಇರುವವನಾದ್ದರಿಂದ ಮಕ್ಕಳನ್ನು ಕುರಿತು ಯೋಚಿಸುವುದಾಗಲಿ, ಅವರನ್ನು ನೋಡಬೇಕೆಂದಾಗಲಿ ನಡೆಯಲಿಲ್ಲ. ಹೋದವರಿಗೆ ಮುಖವನ್ನು ಸಹ ತೋರಿಸದೆ ತನ್ನ ನಿವಾಸ ಅವರಿಗೆ ತಿಳಿಯದಂತೆ ಮಾಡಿದ್ದಾನೆ.

ಸ್ವಲ್ಪ ಕಾಲ ಹೀಗೆ ಕಳೆದು ಹೋದಾಗ ಆ 14 ಜನ ಮಕ್ಕಳಲ್ಲಿ ಒಬ್ಬನಿಗೆ ಹೊಸ ವಿಧದ ರೋಗ ಬಂದಿತು. ಆ ರೋಗಕ್ಕೆ ಯಾವ ಡಾಕ್ಟರುಗಳ ಬಳಿಯಾಗಲಿ ಔಷಧವಿಲ್ಲ. ಆ ರೋಗ ನಿವಾರಣೋಪಾಯ ತನ್ನ ತಂದೆಗೆ ಒಬ್ಬನಿಗೆ ಗೊತ್ತು, ಆಗ ಅವನಿಗೆ ತಂದೆ ಜ್ಞಾಪಕ ಬಂದನು. ತಂದೆಯನ್ನು ಕುರಿತು ವಿಚಾರಿಸಿದರೆ ಆತನ ವಿಳಾಸವೇ ದೊರಕಲಿಲ್ಲ. ತಂದೆಯೇನೋ ಇದ್ದರೂ ಕಾಣಿಸದಂತವನಾದನು. ತಂದೆ ಬಳಿ ಉಳಿದಿರುವ ಸೋದರರು

ಕಾಣಿಸಿದಾಗ ತಂದೆಯನ್ನು ಕುರಿತು ಕೇಳಿದರೆ ನೀವು ಪಿತೃದ್ರೋಹಿಗಳೆಂದು ಬೈದು ತಂದೆ ವಿಷಯ ಹೇಳದೆ ಹೋದರು. ಹೀಗೆ ಉಳಿದ ಮಕ್ಕಳಿಗು ಸಹ ವಿಧವಿಧಗಳ ಸಮಸ್ಯೆಗಳೆದುರಾದವು. ಕೆಲವರಿಗೆ ರೋಗಗಳು, ಕೆಲವರಿಗೆ ತಮಗಿರುವ ಆಸ್ಥಿ ಸಹ ಹೋಗಿರುವುದು, ಕೆಲವರಿಗೆ ಕುಟುಂಬ ಸಮಸ್ಯೆಗಳು, ಒಬ್ಬನಿಗೆ ಮಾವನ ಸಮಸ್ಯೆ, ಒಬ್ಬನಿಗೆ ಅತ್ತೆಯ ಸಮಸ್ಯೆ ಹೀಗೆ ಅನೇಕ ವಿಧಗಳಲ್ಲಿ ಅವರು ಪೀಡಿತರಾಗಿದ್ದರು.

ತಂದೆಯನ್ನು ಬಿಟ್ಟು ಬಂದು ಸುಖವಾಗಿ ಇರಬೇಕೆಂದುಕೊಂಡವರಿಗೆ ತಂದೆಬಳಿಯಿದ್ದ ಸುಖ ಹೊರಗೆ ಕಾಣಿಸಲಿಲ್ಲ. ಮೇಲಾಗಿ ಬಾಧೆಗಳೆ ಹೆಚ್ಚಾಗಿವೆ. ತಮ್ಮ ಸಮಸ್ಯೆಗಳು ತೀರಿಸುವವನು ಕೊನೆಗೆ ತಂದೆ ಒಬ್ಬನೆಯೆಂದು ಕೆಲವರು ಗ್ರಹಿಸಿದರು. ತಮ್ಮ ತಂದೆಗೆ ಬಂದ ರೋಗ ಆತನನ್ನೇನು ಮಾಡಲಿಲ್ಲವೆಂದು, ತಮಗೆ ಬಂದ ರೋಗವೆ ತಮ್ಮನ್ನು ಪೀಡಿಸುತ್ತಿದೆಯೆಂದು ಕೆಲವರು ತಿಳಿದುಕೊಂಡರು. ಕೊನೆಗೆ ತಂದೆಯನ್ನು ಹುಡುಕತೊಡಗಿದರು. ಆದರೂ ಆತನು ಕಾಣಿಸಲಿಲ್ಲ. ಇದು ಒಂದು ಭೇತಾಳನ ಕಥೆ. ಇದರಲ್ಲಿ ವಿಕ್ರಮಾರ್ಕನನ್ನು ಭೇತಾಳನು ಪ್ರಶ್ನಿಸುತ್ತಾನೆ. ಅವು 1) ಬಿಟ್ಟು ಹೋದ ಮಕ್ಕಳಿಗೆ ತಂದೆ ಕಾಣಿಸುವುದು ಸರಿಯಾದ ಕೆಲಸವೇನಾ? 2) ತನ್ನ ಬಳಿ ಇರುವ ಮಕ್ಕಳಿಗು ತನ್ನನ್ನು ಬಿಟ್ಟು ಓಡಿಹೋದ ಮಕ್ಕಳಿಗು ಆ ತಂದೆ ಆಸ್ಥಿಯಲ್ಲಿ ಭೇದವಿರುತ್ತದಾ? 3) ಆತನು ಕಾಣಿಸದೆ ಹೋದರೆ ಕೊನೆಗೆ ಅವರ ಪರಿಸ್ಥಿತಿ ಏನಾಗುತ್ತದೆ? ಇವುಗಳಿಗೆ ಸಮಾಧಾನ ವಿಕ್ರಮಾರ್ಕನು ಬಾಯಿಬಿಡಲಿಲ್ಲ. ಬಾಯಿ ಬಿಟ್ಟರೆ ಭೇತಾಳನು ಹೋಗುತ್ತಾನೆ. ತಿಳಿದು ಹೇಳದೆ ಇದ್ದರೆ ವಿಕ್ರಮಾರ್ಕನ ತಲೆ ಒಡೆಯುತ್ತದೆ. ಆದ್ದರಿಂದ ವಿಕ್ರಮಾರ್ಕನು ಬಾಯಿಬಿಡದೆ ಅರ್ಥವಾಗದ ಶಬ್ದದಿಂದ ಉತ್ತರ ಹೇಳಿದನು. ಆದ್ದರಿಂದ ಭೇತಾಳನು ವಿಕ್ರಮಾರ್ಕನನ್ನು ಬಿಟ್ಟು ಹೋಗಲು ಸಾಧ್ಯವಾಗಲಿಲ್ಲ. ವಿಕ್ರಮಾರ್ಕನ ತಲೆ ಒಡೆಯಲಿಲ್ಲ. ಆ ಉತ್ತರವೇನೊ ಊಹಿಸಿ ವಿವರಿಸಿ ಹೇಳಿರಿ.

# ಆತ್ಮ ಬಂಧುವು – ಶರೀರ ಬಂಧುವು

ಪ್ರತಿ ಮನುಷ್ಯನಿಗು ಭೂಮಿ ಮೇಲೆ ಶರೀರ ಬಂಧುಗಳು ತಪ್ಪದೆ ಇರುತ್ತಾರೆ. ಅವರು ತಾಯಿತಂದೆಯರು, ಅಣ್ಣತಮ್ಮಂದಿರು, ಅಕ್ಕ ತಂಗಿಯರು, ಮಗ ಸೊಸೆಯರು, ಮಗಳು ಅಳಿಯಂದಿರು, ಮೊಮ್ಮಗ, ಮೊಮ್ಮಗಳು ಯಾರಾದರು ಶರೀರ ಬಂಧುಗಳೆಂದೆ ಹೇಳಬಹುದು. ಶರೀರಕ್ಕೆ ಸಂಬಂಧಿಸಿ ದವರನ್ನೆಲ್ಲ ಇವರು ನನ್ನವರು ಎಂದು ಅಂದುಕೊಳ್ಳುವುದು ನಮ್ಮ ತಲೆಯೊಳಗಿನ ಒಂದು ಗುಣ ಪ್ರಭಾವ. ಆ ಗುಣದ ಹೆಸರು ಮೋಹಗುಣ. **'ನಾ'** ಎಂದು ಎಲ್ಲಾದರೆ ಭಾವವನ್ನು ಕಲ್ಪಸುತ್ತದೊ ಅಲ್ಲಿ ಮೋಹಗುಣ ಪ್ರಭಾವವೆಂದೆ ತಿಳಿಯಬೇಕು. ಶರೀರ ಬಂಧುಗಳು ಎಲ್ಲರಿಗೂ ಇದ್ದರೂ ಆತ್ಮ ಬಂಧುಗಳೆನ್ನು ವವರು ಎಲ್ಲರಿಗು ಇರುವುದಿಲ್ಲ.

ಆತ್ಮ ಬಂಧುಗಳೆನ್ನುವವರು ಶರೀರ ಬಂಧುತ್ವಕ್ಕೆ ಸಂಬಂಧಿಸಿದವರಲ್ಲ. ಶರೀರದೊಳಗಿರುವ ಆತ್ಮಕ್ಕೆ ಸಂಬಂಧಿಸಿದವರೆಂದು ತಿಳಿಯಬೇಕು. ಶರೀರ ಬಂಧುಗಳು ಇವನು ಮಗ, ಇವನು ಅವನು ಎಂದು ಹೇಳುತ್ತಾ ಅವನಿಗದು ಮಾಡಬೇಕು, ಇವನಿಗಿದು ಮಾಡಬೇಕೆಂದೇ ಹೇಳುತ್ತಿರುತ್ತಾರೆ. ಆದರೆ ಆತ್ಮ ಬಂಧುಗಳು ಆತ್ಮ, ಜೀವಾತ್ಮ, ಪರಮಾತ್ಮ ಎನ್ನುವ ಮೂರು ಬಂಧುತ್ವಗಳನ್ನೆ ತಿಳಿಸುತ್ತ, ನೀನು ಜೀವಾತ್ಮ, ಆತ್ಮ ಪರಮಾತ್ಮಗಳ ಕುರಿತು ಮಾಡಬೇ ಕಾಗಿರುವು ದೆಂದು ತಿಳಿಸುತ್ತಾರೆ. ಶರೀರ ಬಂಧುಗಳು ಪ್ರಪಂಚ ಧನವನ್ನು ಕುರಿತು ಮಾತನಾಡುವರು. ಆತ್ಮ ಬಂಧುಗಳು ಜ್ಞಾನಧನವನ್ನು ಕುರಿತು ಮಾತ ನಾಡುವರು. ಶರೀರ ಬಂಧುಗಳು ಗುಣಗಳ ವಿರುದ್ಧತೆಗಳಿಂದ ಹಿಂಸಿಸುವರು. ಆತ್ಮ ಬಂಧುಗಳು ಜ್ಞಾನ ಐಕ್ಯತೆಯಿಂದ ಒಬ್ಬರಿಗೊಬ್ಬರು ಸಹಕರಿಸಿ ಕೊಳ್ಳುವರು. ಹೀಗೆ ಶರೀರ ಬಂಧುಗಳಿಗೆ ಆತ್ಮ ಬಂಧುಗಳಿಗೆ ಎಷ್ಟೋ ವ್ಯತ್ಯಾಸಗಳು ಇವೆ. ಆದರೆ ಶರೀರ ಬಂಧುಗಳು ಇವರೆಂದು ತಿಳಿಯುತ್ತದೆ ಅಲ್ಲವೆ ಆತ್ಮ ಬಂಧುಗಳು ಯಾರೆಂದು ತಿಳಿಯಬೇಕೆಂದರೆ!

ಆತ್ಮಜ್ಞಾನವನ್ನು ಬೋಧಿಸುವ ಗುರು ಮುಖ್ಯವಾದ ಆತ್ಮಬಂಧು. ಆತ್ಮಬಂಧುವಾದ ಗುರು ಯಾವ ಕೆಲವರಿಗೊ ಅಪರೂಪವಾಗಿ ಇರುವನು. ಶರೀರ ಬಂಧುಗಳ ಹಾಗೆ ಆತ್ಮಬಂಧುವನ್ನು ಸಹ ಪ್ರತಿಯೊಬ್ಬರು ಇಟ್ಟುಕೊಳ್ಳ ಬಹುದಲ್ಲ ಎಂಬ ಪ್ರಶ್ನೆ ಬಂದರೆ ಹಾಗೆ ಸಾಧ್ಯವಾಗದೆಂದೇ ಹೇಳಬಹುದು. ಏಕೆಂದರೆ! ಶರೀರ ಬಂಧುವನ್ನು ಬಿಟ್ಟು ಹೋಗದಂತೆ ನಮ್ಮ ತಲೆಯಲ್ಲಿನ ಗುಣಗಳೆ ಮಾಡುತ್ತಿವೆ. ಹಾಗೆ ಆತ್ಮಬಂಧುವನ್ನು ಗುರುವನ್ನು ಬಿಟ್ಟು ಹೋಗದಂತೆ ಮಾಡುವುದು ಯಾವುದು ನಮ್ಮಲ್ಲಿ ಇಲ್ಲ. ಮೇಲಾಗಿ ಶರೀರ ಬಂಧುಗಳಾದವರನ್ನು ಬಿಟ್ಟು ಹೋಗದಂತೆ ಮಾಡುವ ಗುಣಗಳೇ ಆತ್ಮ ಬಂಧುವಾದ ಗುರುವನ್ನು ಬಿಟ್ಟು ಹೋಗುವಂತೆ ನಿರಂತರವೂ ಅನೇಕ ಪ್ರಯತ್ನಗಳು ಮಾಡುತ್ತಿರುತ್ತವೆ. ಆದ್ದರಿಂದ ಆತ್ಮ ಬಂಧುವನ್ನು ಎಲ್ಲರು ನಿಲ್ಲಿಸಿಕೊಳ್ಳಲಾರರು.

ಆತ್ಮ ಬಂಧುವನ್ನು ನಿಲ್ಲಿಸಿಕೊಳ್ಳಬೇಕೆಂದರೆ ಗಟ್ಟಿ ಶ್ರದ್ಧೆ ಇರಬೇಕು. ತೀಕ್ಷಣವಾದ ಶ್ರದ್ಧೆ ಇರುವವರಿಗೆ ಗುರು ಆತ್ಮ ಬಂಧುವಾಗಿ ಇರುವನು. ಎಂತಹ ಶ್ರದ್ಧೆ ಇರಬೇಕೆಂದರೆ ಒಂದು ಮಹತ್ತರ ಗ್ರಂಥದಲ್ಲಿ ಒಬ್ಬ ಗುರು ಹೀಗೆ ಹೇಳಿದ್ದಾನೆ. **"ಆತ್ಮಜ್ಞಾನದ ಬಗ್ಗೆ ನಿನ್ನ ಕೈ ನಿನ್ನನ್ನು ಅಭ್ಯಂತರ ಪಡಿಸಿದರೆ ಅದನ್ನು ಕತ್ತರಿಸಿ ಹಾಕು. ನೀನು ಎರಡು ಕೈಗಳಿದ್ದು ನರಕದಲ್ಲಿ ಆರದ ಅಗ್ನಿಯಲ್ಲಿ ಬೀಳುವುದಕ್ಕಿಂತ ಅಂಗಹೀನನಾಗಿ ಮೋಕ್ಷದಲ್ಲಿ ಪ್ರವೇಶಿಸುವುದು ಮೇಲು. ನಿನ್ನ ಪಾದ ನಿನ್ನನ್ನು ಅಭ್ಯಂತರ ಪಡಿಸಿದರೆ ಅದನ್ನು ಕತ್ತರಿಸಿ ಹಾಕು. ಎರಡು ಪಾದಗಳಿದ್ದು ನರಕದಲ್ಲಿ ಬೀಳುವುದಕ್ಕಿಂತ ಕುಂಟನಾಗಿ ದೈವಸನ್ನಿಧಿ ಸೇರುವುದು ಮೇಲು. ನಿನ್ನ ಕಣ್ಣು ನಿನ್ನನ್ನು ಅಭ್ಯಂತರ ಪಡಿಸಿದರೆ ಅದನ್ನು ತೆಗೆದು ಬಿಸಾಡು. ಎರಡು ಕಣ್ಣುಗಳು ಇದ್ದು ಬದುಕುವುದಕ್ಕಿಂತ ಒಂಟಿಕಣ್ಣು ಇರುವವನಾಗಿ ದೇವರ ರಾಜ್ಯದಲ್ಲಿ ಪ್ರವೇಶಿಸುವುದು ಮೇಲು"** ಒಬ್ಬ ಉನ್ನತವಾದ ಗುರು ಹೇಳಿದ ಮಾತುಗಳಿವು. ಅಂತಹ ಶ್ರದ್ಧೆ ಇರಬೇಕೆಂದು ಜ್ಞಾನಮಾರ್ಗದಲ್ಲಿ ಶರೀರಕ್ಕೆ ಅಂಟಿಕೊಂಡಿರುವ ಅವಯವಗಳಿಗು ಸಹ ಬೆಲೆ ಕೊಡಬೇಡವೆಂದು ಆತನು ತಿಳಿಸಿದರೆ ಶರೀರಕ್ಕೆ ಅಂಟಿಕೊಳ್ಳದೆ ಪಕ್ಕದಲ್ಲಿರುವ ಶರೀರ ಬಂಧುಗಳಿಗೆ ಪ್ರತ್ಯೇಕವಾಗಿ ಹೇಳಬೇಕಾದ

ಅವಶ್ಯವಿಲ್ಲ. ಇರುವ ಪದ್ಧತಿ ಇದು ಆದರೆ ಬಹಳ ಜನ ಶಿಷ್ಯರ ಪದ್ಧತಿ ಹೇಗಿದೆಯೆಂದರೆ! ಒಂದು ಕಥೆಯನ್ನು ವಿವರಿಸಿಕೊಂಡು ನೋಡೋಣ.

ಪೂರ್ವಕಾಲದಲ್ಲಿ ಒಬ್ಬ ಶಿಷ್ಯನು ತನ್ನ ಗುರುವು ಹತ್ತಿರ ಸರ್ವಜ್ಞಾನವನ್ನು ತಿಳಿದುಕೊಂಡಿದ್ದನಂತೆ. ಆ ಶಿಷ್ಯನು ಕೊನೆಯಲ್ಲಿ ಗುರುದಕ್ಷಿಣೆ ಏನು ಕೊಡಬೇಕೆಂದು ಗುರುವನ್ನು ಕೇಳಿದಾಗ ನಿಮ್ಮ ಮನೆಯಲ್ಲಿ ಒಂದು ಹೊತ್ತು ವಿಶೇಷವಾದ ಭೋಜನ ಇಡಬೇಕೆಂದು ಗುರು ಕೋರಿದನಂತೆ. ಆ ಮಾತು ಗುರುಗಳು ಅನ್ನುತ್ತಲೆ ಶಿಷ್ಯನಿಗೆ ಸ್ವಲ್ಪ ಭಯವಾಯಿತು. ಏಕೆಂದರೆ ಮನೆಯಲ್ಲಿ ತನ್ನ ಹೆಂಡತಿ ಗುರುಗಳಿಗೆ ವಿಶೇಷ ಭೋಜನ ಅಲ್ಲ ಮಾಮೂಲು ಭೋಜನ ವಾದರು ಇಡುತ್ತಾಳೋ ಇಲ್ಲವೋ ಎಂದು ಗುರುಗಳು ಗುರುದಕ್ಷಿಣೆಯಾಗಿ ಕೇಳಿರುವುದನ್ನು ತೀರಿಸದೆ ಹೋದರೆ ಹೇಗೆ ಆದ್ದರಿಂದ ಸರಿಯೆಂದು ಒಪ್ಪಿಕೊಂಡ ಶಿಷ್ಯನು ಯಾವಾಗ ಬರುತ್ತೀರ ಸ್ವಾಮಿ ಎಲ್ಲ ಏರ್ಪಾಟುಗಳು ಮಾಡಿಕೊಳ್ಳುವು ದಕ್ಕೆಂದು ಕೇಳಿದಾಗ ನಾಳೆ ಬರುವ ಅಮಾವಾಸ್ಯೆ ದಿನದಂದು ಬರುತ್ತೇನೆಂದು ಗುರು ಹೇಳಿದನು. ಇದು ಮೊದಲ ಶಿಷ್ಯನಿಗೆ ಹೇಳಿರುವುದು. ಗುರುಗಳಿಗೆ ಒಟ್ಟು ಏಳು ಜನ ಶಿಷ್ಯರಲ್ಲವೆ! ಇನ್ನು ಎರಡನೆ ಶಿಷ್ಯನಿಗೆ ಎರಡನೆ ದಿನದಂದು ಹತ್ತಿರಕ್ಕೆ ಕರೆದು ಶಿಷ್ಯಾ ನನ್ನ ಬಳಿ ಕಲಿಯಬೇಕಾದ ಜ್ಞಾನವೆಲ್ಲಾ ಮುಗಿದಿದೆ ಆದ್ದರಿಂದ ನೀನು ನನಗೆ ಗುರುದಕ್ಷಿಣೆ ಕೊಡಬೇಕಾಗುತ್ತದೆಂದಾಗ ಹೌದಾ ಸ್ವಾಮಿ ಎಂದು ಏನು ಸಮರ್ಪಿಸಿಕೊಳ್ಳಬೇ ಕೆಂದು ಕೇಳಿದನು. ಗುರುಗಳು ಮೊದಲ ಶಿಷ್ಯನಿಗೆ ಹೇಳಿದಂತೆ ಎರಡನೆ ಶಿಷ್ಯನಿಗು ಸಹ ನಿಮ್ಮ ಮನೆಯ ಒಂದು ಹೊತ್ತು ಭೋಜನ ಇಡಬೇಕೆಂದು ಕೇಳಿದನು. ಆ ಮಾತು ಕೇಳಿದ ಎರಡನೆ ಶಿಷ್ಯ ಸಂತೋಷಪಟ್ಟು ಇಷ್ಟು ಜ್ಞಾನ ಹೇಳಿದ ಗುರುವಿಗೆ ಮನೆಯಲ್ಲಿ ಅನ್ನ ಇಡುವುದು ದೊಡ್ಡಕೆಲಸವಲ್ಲ ಎಂದುಕೊಂಡು ಯಾವಾಗ ಬರುತ್ತೀರ ಸ್ವಾಮಿ ಎಂದು ಕೇಳಿದಾಗ ಅಮಾವಾಸ್ಯೆ ದಿನ ರಾತ್ರಿಗೆಂದು ಆತನಿಗು ಸಹ ಗುರು ಹೇಳಿ ಕಳುಹಿಸಿದನು.

ಇನ್ನು ಮೂರನೆ ಶಿಷ್ಯನನ್ನು ಸಹ ಮೂರನೆ ದಿನ ಕರೆದು ಗುರು ದಕ್ಷಿಣೆ ಕೇಳಿದನು. ಗುರುದಕ್ಷಿಣೆ ಏನು ಕೊಡಬೇಕೆಂದು ಶಿಷ್ಯ ಕೇಳಿದಾಗ ನಿನಗಿರುವ 150 ಎಕರೆಗಳಲ್ಲಿ ಅಮಾವಾಸ್ಯೆ ನಂತರ ಒಂದು ಎಕರೆ ಒಳ್ಳೆಯ ಹೊಲ ಕೊಡಬೇಕೆಂದು ಕೇಳಿದನು. ಹಾಗೆ ನಾಲ್ಕನೆಯವನನ್ನು ಮರುದಿನ ಕರೆದು ನನಗೊಬ್ಬ ಶತ್ರುವಿದ್ದಾನೆ ಆತನನ್ನು ನೀನು ಈ ಅಮಾವಾಸ್ಯೆ ನಂತರ ಎರಡು ಮೂರು ದಿನಗಳಲ್ಲಿ ಒದ್ದು ಬರಬೇಕು ಅದೇ ನನಗೆ ಗುರುದಕ್ಷಿಣೆ ಎಂದು ಹೇಳಿದನು. ಇನ್ನು ಐದನೆಯವನನ್ನು ಸಹ ನಂತರದ ದಿನ ಕರೆದು ಅಪ್ಪಾ ನೀನು ಗುರುದಕ್ಷಿಣೆ ಕೊಡಬೇಕಾಗಿದೆಯೆಂದು ಕೇಳಿದಾಗ ಆ ಶಿಷ್ಯನು ಸರಿಯೆಂದು ಒಪ್ಪಿಕೊಂಡು ಗುರುದಕ್ಷಿಣೆ ಏನೆಂದು ಕೇಳಿದನು. ನೀನು ಅಮಾವಾಸ್ಯೆ ನಂತರದಿಂದ ಒಂದು ವರ್ಷ ಇಲ್ಲಿಯೇ ಕೆಲಸಗಳು ಮಾಡುತ್ತಾ ಇರಬೇಕೆಂದು ಗುರು ಕೋರಿದನು. ಸರಿಯೆಂದು ಆತನು ತಲೆದೂಗಿದನು. ಉಳಿದ ಇಬ್ಬರಲ್ಲಿ ಆರನೆಯವನನ್ನು ಕರೆದು ಗುರುದಕ್ಷಿಣೆ ವಿಷಯ ಕೇಳಿದನು. ಆತನು ಸರಿ ನೀವೇನು ಹೇಳಿದರೆ ಅದೇ ವಿಧದಲ್ಲಿ ಸಮರ್ಪಿಸಿಕೊಳ್ಳುತ್ತೇನೆಂದನು. ಆಗ ನಿನಗೆ ಪ್ರಿಯವಾದವರು ಯಾರೊ ತಿಳಿಸೆಂದು ಗುರು ಕೇಳಿದಾಗ ನನ್ನ ಹೆಂಡತಿ, ನನ್ನ ಮಗ, ನನ್ನ ಬಂಧುಗಳೆಂದು ಆತನು ಸಮಾಧಾನ ಹೇಳಿದನು. ನಾಳೆ ಅಮಾವಾಸ್ಯೆ ನಂತರ ನಿನ್ನ ಮನೆಗೆ ಬರುತ್ತೇನೆ ಆಗ ನಿನಗೆ ಪ್ರಿಯವಾದವರನ್ನು ನನಗೆ ತೋರಿಸು. ಅದೇ ನೀನು ಕೊಡುವ ಗುರುದಕ್ಷಿಣೆಯೆಂದು ಹೇಳಿದನು.

ಇನ್ನು ಉಳಿದ ಏಳನೇ ಶಿಷ್ಯನನ್ನು ಕರೆದು ಗುರು ದಕ್ಷಿಣೆ ವಿಷಯವಾಗಿ ನಾನೊಂದು ಔಷಧವನ್ನು ಕಂಡುಕೊಳ್ಳಬೇಕಾಗಿದೆ. ಅದರ ಪರಿಶೋಧನೆಗೆ ನಿನ್ನ ಶರೀರದೊಳಗಿನ ರಕ್ತ ಬೇಕು ಅದೂ ಅಮಾವಾಸ್ಯೆ ಹೋದ ಬಿದಿಗೆ ದಿನ ಅವಶ್ಯವೆಂದನು. ಆ ಶಿಷ್ಯನು ಆಸ್ಪತ್ರೆಯಲ್ಲಿ ಎಷ್ಟೋ ಜನರು ರಕ್ತದಾನ ಮಾಡುತ್ತಾರೆ. ಅದಕ್ಕಿಂತ ಕಡಿಮೆ ಈ ಕಾರ್ಯವಲ್ಲ ಆದ್ದರಿಂದ ತಪ್ಪದೆ ಕೊಡುತ್ತೇನೆಂದು ಮಾತು ಕೊಟ್ಟನು.

ಹೀಗೆ ಏಳು ಜನ ಶಿಷ್ಯರು ಗುರುಗಳು ಕೋರಿದಂತೆ ತಮ್ಮ ತಮ್ಮ ದಕ್ಷಿಣೆಗಳನ್ನು ಗುರುಗಳಿಗೆ ತಪ್ಪದೆ ಸಮರ್ಪಿಸಬೇಕೆಂದುಕೊಂಡರು. ಇನ್ನೂ ಅಮಾವಾಸ್ಯೆ 15 ದಿನಗಳು ಇದೆಯಲ್ಲವೆ! ಮೊದಲ ಶಿಷ್ಯನು ಗುರುಗಳಿಗೆ ಕೊಟ್ಟ ಮಾತಿನ ಪ್ರಕಾರ ಮನೆಯಲ್ಲಿ ವಿಶೇಷ ಭೋಜನ ತಯಾರು ಮಾಡುವುದಕ್ಕೆ ಈಗಿನಿಂದಲೆ ಪ್ರಾರಂಭಮಾಡಬೇಕಾಗಿದೆ. ಏಕೆಂದರೆ ಆತನ ಹೆಂಡತಿಗೆ ಜ್ಞಾನ ವೆಂದರೆ ಏನೊ ತಿಳಿಯದು. ಮೇಲಾಗಿ ಮನೆಯಲ್ಲಿ ಪೈಸಾ ಹೋಗ ಬಾರದೆಂಬ ಭಾವವಿರುವವಳು. ಗಂಡನ ಇಷ್ಟ ಅಲ್ಲದೆ ಎಲ್ಲ ತನ್ನ ಇಷ್ಟ ಪ್ರಕಾರವೆ ನಡೆಯಬೇ ಕೆನ್ನುತ್ತಿದ್ದಳು. ಗಂಡನಕಡೆ ಬಂಧುಗಳು ಯಾರು ಬಂದರು ಒಳ್ಳೆ ನೀರು ಸಹ ಕೊಟ್ಟಿರುವಳಲ್ಲ. ಶಿಷ್ಯನಿಗೆ ಇದೊಂದು ಪರೀಕ್ಷೆಯಂತಾಗಿದೆ. ಹದಿನೈದು ದಿನಗಳ ಮೊದಲಿನಿಂದಲು ಹೆಂಡತಿಯನ್ನು ಸಿನಿಮಾಗಳಿಗೆ ಕರೆದುಕೊಂಡು ಹೋಗಿ ಇಷ್ಟ ಬಂದ ಸೀರೆಗಳೆಲ್ಲ ಕೊಡಿಸಿ ಸ್ವಲ್ಪ ಚೆನ್ನಾಗಿ ಮಾತನಾಡುವಂತೆ ಮಾಡಿ ಕೊಂಡನು. ಹೆಂಡತಿ ನಿಧಾನದಿಂದ ಮಾತನಾಡುವ ಸಮಯದಲ್ಲಿ ತನ್ನ ಒಳಗಿರುವ ವಿಶೇಷ ಭೋಜನದ ಮಾತು ಮೆಲ್ಲನೆ ಹೇಳಿದನು. ಹೆಂಡತಿ ಆ ಮಾತು ಕೇಳುತ್ತಲೆ ಬಾಲ ತುಳಿದ ಹಾವಿನಂತೆ ಎದ್ದು ಅಡ್ಡ ಬಂದವರಿಗೆಲ್ಲ ಅಡಿಗೆ ಮಾಡಿಡಲು ನಾನೇನು ಕೆಲಸದವಳಲ್ಲ ಎಂದು ಪ್ರಾರಂಭಿಸಿದಳು. ಆದರೂ ಮುದ್ದುಮಾಡಿ ಇದೇ ಕೊನೆಯ ಕೋರಿಕೆ ಎಂದು ಹೇಳಿ ಇಲ್ಲದೆ ಹೋದರೆ ನನ್ನ ಮರ್ಯಾದೆ ಹೋಗುತ್ತದೆಂದು ಏನೇನೊ ಹೇಳಿ ಕೊನೆಗೆ ವಿಶೇಷ ಭೋಜನ ಇಡುವಂತೆ ಒಪ್ಪಿಸಿಕೊಂಡನು. ಇಷ್ಟು ದಿನಗಳು ಗುರುಗಳು ಹೇಳಿದ ಜ್ಞಾನಕ್ಕಿಂತ ಈಗ ನಾನು ಶ್ರಮಪಟ್ಟಿರುವುದೆ ಹೆಚ್ಚೆಂದುಕೊಂಡನು.

ಅಮಾವಾಸ್ಯೆ ದಿನ ಬಂದಿತು. ಮೊದಲನೆ ಶಿಷ್ಯ ಮುಂಜಾನೆ ತನ್ನ ಹೆಂಡತಿಗೆ ಮತ್ತೊಂದು ಬಾರಿ ಹೇಳಿ ಗುರುಗಳ ಬಳಿಗೆ ಬಂದು ಗುರುಗಳನ್ನು ಭೋಜನಕ್ಕೆ ಕರೆದುಕೊಂಡು ಮಧ್ಯಾಹ್ನ 12 ಗಂಟೆಗೆ ಮನೆಗೆ ಹೋದನು. ಪಾಪ ಆತನ ಹೆಂಡತಿ ಏನೂ ಮಾಡಿಲ್ಲ. ಗುರುಗಳನ್ನು ಮಂಚದ ಮೇಲೆ ಕೂರಿಸಿ ಹೆಂಡತಿಗೆ ಏನು ಹೇಳಿಕೊಂಡನೊ ಏನೊ ಆಕೆ ಅಡಿಗೆ ಮಾಡಲು

ಪ್ರಾರಂಭಿಸಿದಳು. ಪಾಪ ಗುರುಗಳು ವಿಶೇಷ ಭೋಜನವೆಂದು ಬೆಳಗ್ಗೆ ಸಹ ಏನು ತಿಂದುಬರಲಿಲ್ಲ. ವೇಳೆಗೆ ಸ್ವಲ್ಪ ಅನ್ನವಾದರು ಇಡುತ್ತಾರೆಂದು ಎಷ್ಟು ಎದುರು ನೋಡಿದರು ಫಲಿತವಿಲ್ಲ. ಇವರು ಇಲ್ಲ ಹೋಗು ಅನ್ನುವವರೆಗು ಹಾಗೇ ಕುಳಿತುಕೊಳ್ಳಬೇಕೆಂದುಕೊಂಡ ಗುರುಗಳಿಗೆ ಸಾಯಂಕಾಲ 4 ಗಂಟೆಗಳಿಗೆ ಸಾಧಾರಣವಾದ ಭೋಜನವನ್ನೇ ಆ ಹೆಣ್ಣುಮಗಳು ಇಟ್ಟಳು. ಈತನು ಗುರುದಕ್ಷಿಣೆ ಕೊಟ್ಟರು ಹೋಗಲಿ ಕೊಡದೇ ಹೋದರೇ ಹೋಗಲಿ ನನ್ನನ್ನು ಹಸಿವಿನಿಂದ ಕೂರಿಸಿದರೆಂದುಕೊಳ್ಳುತ್ತಾ ಸಿಕ್ಕಿರುವುದು ಸಾಕೆಂದು ತಿಂದು ಹೊರಗೆ ಬಂದನು ಗುರುವು. ಗುರುವಿನೊಂದಿಗೆ ಊಟ ಮಾಡಿ ಹೊರಗೆ ಬಂದ ಶಿಷ್ಯನನ್ನು ನೋಡಿ ನೀನು ನಾಳೆ ಹುಣ್ಣಿಮೆ ದಿನ ನನ್ನ ಬಳಿಗೆ ಬಾ ಎಂದು ಹೇಳಿ ಹೊರಟು ಬಂದನು.

ಎರಡನೇ ಶಿಷ್ಯನು ರಾತ್ರಿ ಊಟಕ್ಕಾಗಿ ಸಾಯಂಕಾಲ ಐದು ಗಂಟೆಗಳಿಗೆ ಗುರುವಿನೊಂದಿಗೆ ಸೇರಿದನು. ಮೊದಲ ಅನುಭವವನ್ನು ನೋಡಿದ ಗುರುಗಳು ಎರಡನೆ ಶಿಷ್ಯನು ರಾತ್ರಿ ಭೋಜನಕ್ಕೆ ಕರೆಯುತ್ತಿದ್ದರು ನಾನು ಬರುವುದಿಲ್ಲವೆಂದು ಹೇಳಿದನು. ಆದರೂ ಆ ಶಿಷ್ಯ ತಪ್ಪದೆ ಬರಬೇಕೆಂದು ಹಠ ಹಿಡಿದನು. ನನಗೋಸ್ಕರ ಅನ್ನ ಮಾಡಿದ್ದೀರಾ ಎಂದು ಗುರುಗಳು ಮೊದಲೆ ಕೇಳಿದರೆ ನಿಮಗೋಸ್ಕರವೆ ಮಾಡಿದ್ದೇವೆಂದು ತಪ್ಪದೆ ಬರಬೇಕೆಂದು ಆತನು ಗಟ್ಟಿಯಾಗಿ ಹೇಳುವುದರಿಂದ ಈತನು ಇನ್ನೂ ಮದುವೆಯಾಗದವನೆಂದು ಮನೆಯಲ್ಲಿ ಹೆಂಡತಿ ಇರುವುದಿಲ್ಲ ಪರವಾಗಿಲ್ಲ ಎಂದು ಗುರುವೆಂದುಕೊಂಡು ಶಿಷ್ಯನೊಂದಿಗೆ ಹೊರಟು ಹೋದನು. ಮನೆಗೆ ಹೋದ ತಕ್ಷಣವೆ ಗುರುಗಳಿಗೆ ಅನ್ನ ಇಡು ಎಂದು ಶಿಷ್ಯನು ತಾಯಿಯನ್ನು ಕೋರಿದನು. ಆ ಮಾತು ಕೇಳಿದ ತಕ್ಷಣವೆ ಆತನ ಅಮ್ಮನವರು ಜೋರಾಗಿ ಆತನ ಕಡೆ ನೋಡುತ್ತಾ ನಿನಗೆ ಸಾಯಂಕಾಲವೆ ಏನು ಹೇಳಿದ್ದೆನು ಎಂದು ಗದರಿಸಿದಳು. ಆಕೆ ಹಾಗೆ ನೋಡುವುದರಲ್ಲಿಯೆ ನಾನು ಬೇಡವೆಂದು ಹೇಳಿದರೆ ನೀನೇಕೆ ಕರೆದುಕೊಂಡು ಬಂದಿದ್ದೀಯ ಅನ್ನುವಂತೆ ಗುರುಗಳು ಅರ್ಥಮಾಡಿಕೊಂಡನು. ಸಾಯಂಕಾಲವೆ ಏನು

ಹೇಳಿದ್ದೇನೆನ್ನುವುದರಲ್ಲಿ ಗುರುಗಳ ನಂಬಿಕೆ ಧೃಡವಾಗಿ ಹೋಯಿತು. ಶಿಷ್ಯನು ಏನು ಮಾತನಾಡದೆ ಒಳಗೆ ಹೋದನು. ಗುರುಗಳು ಎಷ್ಟೋ ಸಾಮರ್ಥ್ಯ ಇರುವಂತವನಾದರೂ ಸಹ ತನಗೆ ಎಲ್ಲಾ ಇದ್ದೂ ಸಹ ಹಾಗೆ ಅನ್ನಿಸಿಕೊಳ್ಳುವುದು ಅವಮಾನವಲ್ಲವೆ! ಆದರೂ ಗುರುಗಳು ಸಹಿಸಿಕೊಂಡು ನಾನು ಏನು ಮಾತ ನಾಡಿದರು ಅಲ್ಲಿಂದ ಬಂದ ಶಿಷ್ಯನು ಬಾಧೆಪಡುವನೆಂದು ಕಕ್ಕಲಾರದೆ ನುಂಗಲಾರದೆ ಒಂದು ಕಲ್ಲಿನಂತೆ ಕುಳಿತುಕೊಂಡನು. ಸ್ವಲ್ಪ ಹೊತ್ತಿಗೆ ಶಿಷ್ಯನನ್ನು ಕರೆದು ಹಸಿವಿಲ್ಲವೆಂದು ಅಲ್ಪಾಹಾರದಿಂದ ಸರಿಮಾಡಿಕೊಂಡು ಹೊರಬಿದ್ದನು. ಶಿಷ್ಯನನ್ನು ನೋಡಿ ನೀನು ಹುಣ್ಣಿಮೆ ದಿನ ನನ್ನ ಬಳಿಗೆ ಬಾ ಎಂದು ಹೇಳಿ ಹೊರಟು ಬಂದನು.

ಮೊದಲ ಶಿಷ್ಯನ ಹೆಂಡತಿ ಏನು ಮಾತನಾಡದಂತೆ ಸಾಯಂಕಾಲ 4 ಗಂಟೆಗಳಿಗೆ ಅನ್ನ ಇಟ್ಟು ಕಳುಹಿಸಿದರೆ ಎರಡನೆ ಶಿಷ್ಯನ ಮನೆಯಲ್ಲಿ ಘಾಟಾದ ಮಾತುಗಳನ್ನು ಸಹ ತಿನ್ನಬೇಕಾಗಿ ಬಂದಿತೆಂದುಕೊಂಡನು ಗುರುಗಳು. ಇನ್ನು ಮೂರನೆ ಶಿಷ್ಯನ ಮನೆಗೆ ಹೋಗದೆ ತನ್ನ ಎಕರೆ ಭೂಮಿ ಕುರಿತು ಕೇಳಬೇಕೆಂದುಕೊಂಡನು. ಮೂರನೆಯವನನ್ನು ಕರೆದು ನಾನು ಕೇಳಿದ ಗುರುದಕ್ಷಿಣೆ ಎಕರೆ ಭೂಮಿ ಕೊಡುತ್ತೀಯ ಎಂದು ಕೇಳಿದನು. ಗುರು ಕೇಳಿದಾಗ ಕೊಡಬೇಕೆಂದು ನಿಶ್ಚಯಿಸಿಕೊಂಡ ಶಿಷ್ಯನು 15 ದಿನಗಳು ಕಳೆದು ಹೋಗಿವೆಯಲ್ಲವೆ ಮೊದಲ ನಿಶ್ಚಯು ತನ್ನಲ್ಲಿ ಇಲ್ಲದೆ ಹೋಗಿದೆ. ತನ್ನ ಮನೆಯುವರು ಬೇಡವೆನ್ನುತ್ತಿದ್ದಾರೆಂದು ಬೇಕಾದರೆ ಹತ್ತು ಸಾವಿರ ರೂಪಾಯಿಗಳು ಕೊಡಲು ಹೇಳಿದ್ದಾರೆಂದು ಹೇಳಿದನು. ಗುರುಗಳು ನಕ್ಕು ನಾನು ಹಣ ಕೇಳಲಿಲ್ಲ ಹೊಲ ತಾನೆ ಕೇಳಿದ್ದು ಎಂದು ಮತ್ತೆ ಕೇಳಿದನು. ಆ ಮಾತಿಗೆ ಶಿಷ್ಯನು ವಿವರವಾಗಿ ಹೊಲ ಎಕರೆ 50 ಸಾವಿರ ಮಾಡುತ್ತದೆ. ಅಷ್ಟು ಬೆಲೆಯುಳ್ಳ ಭೂಮಿಯನ್ನು ಬೇಡವೆನ್ನುತ್ತಿದ್ದಾರೆ 10 ಸಾವಿರ ಕೊಡಲು ಹೇಳಿದ್ದಾರೆ ಎಂದನು ಶಿಷ್ಯ. ಆ ಮಾತು ಕೇಳಿದ ಗುರು ಸರಿ ಆ ಹತ್ತು ಸಾವಿರ ತೆಗೆದುಕೊಂಡು ಹುಣ್ಣಿಮೆ ದಿನ ನನ್ನ ಬಳಿಗೆ ಬಾ ಎಂದನು.

ನಾಲ್ಕನೆಯ ಶಿಷ್ಯನು ಅಸಲು ಕಾಣಿಸಲಿಲ್ಲ. ಆತನನ್ನು ಹುಣ್ಣಿಮೆ ದಿನ ತನ್ನ ಬಳಿಗೆ ಬರಲು ಹೇಳೆಂದು ಗುರು ಇತರರಿಗೆ ಹೇಳಿ ಕಳುಹಿಸಿದನು. ಇನ್ನು ಐದನೆಯವನನ್ನು ಕರೆದು ಅಮಾವಾಸ್ಯೆ ಹೋಗಿದೆಯಲ್ಲವೆ ನೀನು ಇಲ್ಲಿಯೆ ಇರು ಎಂದು ಗುರು ತಿಳಿಸಿದಾಗ ಆ ಶಿಷ್ಯನು ಸ್ವಾಮಿಯವರಿಗೆ ನಮಸ್ಕರಿಸಿ ನಮ್ಮ ಮನೆಯನ್ನು, ನಮ್ಮ ಅಣ್ಣತಮ್ಮರನ್ನು ತಾಯಿ ತಂದೆಯರನ್ನು, ಹೆಂಡತಿ ಮಕ್ಕಳನ್ನು ಬಿಟ್ಟು ಇಲ್ಲಿ ಇರುವುದಿಲ್ಲವೆಂದು ಖಚಿತವಾಗಿ ಹೇಳಿ ಇದು ಬಿಟ್ಟು ಇನ್ನು ಏನಾದರೂ ಹೇಳಿರಿ ಮಾಡುತ್ತೇನೆಂದನು. ಆ ಮಾತಿಗೆ ಗುರುಗಳು ನಕ್ಕು ನಾಳೆ ಹುಣ್ಣಿಮೆ ದಿನದಂದು ನನ್ನ ಬಳಿಗೆ ಬಾ ಆಗ ಹೇಳುತ್ತೇ ನೆಂದು ಹೇಳಿ ಕಳುಹಿಸಿದನು.

ಇನ್ನು ಆರನೇ ಶಿಷ್ಯ ಬರಲಿಲ್ಲವಾದ್ದರಿಂದ ಗುರುಗಳೆ ಆತನ ಮನೆಗೆ ಹೋಗಿ ಮಂಚದಲ್ಲಿ ಮಲಗಿಕೊಂಡಿದ್ದ ಶಿಷ್ಯನನ್ನು ನೋಡಿ ಮಾತನಾಡಿಸಿದನು. ಏನಯ್ಯಾ ನಿನ್ನ ಪ್ರಿಯವಾದ ಹೆಂಡತಿ, ನಿನ್ನ ಕುಮಾರನು, ನಿನ್ನ ಬಂಧುಗಳು ಎಲ್ಲಿ ಅವರನ್ನು ನೋಡಿ ಹೋಗಬೇಕೆಂದು ಬಂದಿದ್ದೇನೆಂದನು. ಅದಕ್ಕೆ ಆ ಶಿಷ್ಯನು ಕಣ್ಣಲ್ಲಿ ನೀರು ಸೋರಿಸುತ್ತಾ ನೀನು ಕೇಳಿದ ಗುರುದಕ್ಷಿಣೆ ಈಗ ಕೊಡಲಾರೆನು. ಅವರನ್ನು ತೋರಿಸಲಾರೆನು ನಂತರ ಕೆಲವು ದಿನಗಳಿಗೆ ತೋರಿಸುತ್ತೇನೆಂದನು. ಈಗೇನು ಏಕೆ ತೋರಿಸುವುದಿಲ್ಲ ಎಂದು ಗುರು ಕೇಳಿದನು. ಅದಕ್ಕೆ ಆ ಶಿಷ್ಯನು ಮೊನ್ನೆ ನಾವೊಂದು ಜ್ಞಾನ ವಿಷಯವನ್ನು ಕುರಿತು ವಾದ ಮಾಡಿಕೊಂಡಿದ್ದೇವೆ. ನನ್ನ ಮಗ ನನ್ನ ವಾದಕ್ಕೆ ಕೋಪಗೊಂಡು ನನ್ನ ಕಾಲು ಮುರಿದಿದ್ದಾನೆ. ಆದ್ದರಿಂದ ಮಂಚದಲ್ಲಿ ಬಿದ್ದಿದ್ದೇನೆ. ಸ್ವಲ್ಪ ಗುಣವಾದ ನಂತರ ಅವರನ್ನು ತೋರಿಸುತ್ತೇನೆ ಅವರು ಈಗ ಇಲ್ಲಿ ಇಲ್ಲವೆಂದು ಹೇಳಿದನು. ನೀನು ನಿನ್ನ ಕಾಲು ಗುಣಪಡಿಸಿಕೊಂಡು ಹುಣ್ಣಿಮೆ ದಿನಕ್ಕೆ ನನ್ನ ಬಳಿಗೆ ಬರುತ್ತೀಯ ಎಂದು ಗುರು ಕೇಳಿದರೆ ಸರಿ ಹಾಗೆ ಬರುತ್ತೇನೆಂದು ಶಿಷ್ಯನು ಹೇಳಿದನು.

ಏಳನೆಯ ಶಿಷ್ಯನ ಬಳಿಗೆ ಬಂದು ನನ್ನ ಅವಶ್ಯಕ ಪರಿಶೋಧನೆಗೆ ನಾನು ಬೇಕೆಂದಿರುವುದು ಕೊಡುತ್ತೀಯ ಎಂದನು. ಶಿಷ್ಯನು ಸರಿಯೆಂದು ಒಪ್ಪಿಕೊಂಡನು. ಗುರುವಿಗೆ ಆಶ್ಚರ್ಯವಾಯಿತು. ಇವನೇನು ನನ್ನ ಹೆಂಡತಿ ಬೇಡವೆನ್ನುತ್ತಾಳೆಂದು, ನಮ್ಮ ಅಮ್ಮ ಬೇಡವೆನ್ನುತ್ತಾಳೆಂದು ಹೇಳಲಿಲ್ಲವೆ ಅಂದುಕೊಂಡು ಮತ್ತೆ ಹೀಗೆ ಹೇಳಿದನು. ನನಗೆ ಬೇಕಾಗಿರುವುದು ಕೇವಲ ರಕ್ತವೆ ಅಲ್ಲ ಶರೀರ ಭಾಗದಲ್ಲಿನ ಒಂದು ಕೈಯಿ ಕತ್ತರಿಸಿ ಕೊಡಬೇಕು ಅಲ್ಲಿಂದ ಸ್ರವಿಸುವ ರಕ್ತ ಬೇಕು ಪೂರ್ತಿ ಕೈಯಿ ಕಿತ್ತು ಬಂದ ರಕ್ತವೆ ನನ್ನ ಪರಿಶೋಧನೆಗೆ ಅವಶ್ಯವೆಂದನು. ಆ ಮಾತು ಕೇಳಿದ ಶಿಷ್ಯನು ಮತ್ತೆ ಸಂತೋಷಪಟ್ಟು ಭೂಮಿ ಮೇಲೆ ಹುಟ್ಟಿರುವುದಕ್ಕೆ ಏನು ಪ್ರಯೋಜನೆ ಅಂದುಕೊಂಡ ನನಗೆ ನೀವು ಗುರುದಕ್ಷಿಣೆಯಾಗಿ ನನ್ನ ಶರೀರ ಭಾಗದಲ್ಲಿನ ರಕ್ತ ಕೇಳಿರುವುದು ಬಹಳ ಸಂತೋಷ. ಬ್ರಹ್ಮವಿದ್ಯೆಯನ್ನು ಬೋಧಿಸಿದ ಗುರುವಿಗೆ ಉಪಯೋಗ ಪಡುವುದಕ್ಕಿಂತ ಈ ಪ್ರಪಂಚದಲ್ಲಿ ನನಗೆ ಯಾವುದು ದೊಡ್ಡದಲ್ಲ ಎಂದನು. ಆಗ ಗುರು ನಿಮ್ಮವರ್‍ಯಾರು ಏನು ಅನ್ನುವುದಿಲ್ಲವೆ ಎಂದು ಕೇಳಿದನು ನನ್ನ ಶರೀರ ನನ್ನ ಇಷ್ಟ. ನನ್ನವರು ನೀವೆ ಆಗಲಿ ಈ ಶರೀರಕ್ಕೆ ಸಂಬಂಧಿಸಿದವರು ನನ್ನವರಲ್ಲ ಎಂದು ಶಿಷ್ಯನು ಉತ್ತರ ಕೊಟ್ಟನು. ಆ ಮಾತುಗಳನ್ನು ಕೇಳಿದ ಗುರುವು ಆದರೆ ನಾಳೆ ಬರುವ ಹುಣ್ಣಿಮೆ ದಿನದಂದು ನೀನು ನನ್ನ ಬಳಿಗೆ ಬಾ ಎಂದು ಹೇಳಿ ಹೋದನು.

ಹೀಗೆ ಎಲ್ಲರನ್ನು ಹುಣ್ಣಿಮೆ ದಿನದಂದು ಬರಲು ಹೇಳಿದ ಗುರು ಆ ದಿನದಂದು ಎಲ್ಲರಿಗೋಸ್ಕರ ಆಶ್ರಮದಲ್ಲಿಯೆ ಇದ್ದನು. ಏಳು ಜನ ಶಿಷ್ಯರು ಅಲ್ಲಿಗೆ ಸೇರಿದರು. ಎಲ್ಲರನ್ನು ನೋಡಿ ಮೊದಲನೆ ಶಿಷ್ಯನೊಂದಿಗೆ ಹೀಗೆ ಹೇಳಿದನು. "ಏನಯ್ಯಾ ಸುಮ್ಮನೆ ಗುರುದಕ್ಷಿಣೆಯಾಗಿ ನಿನ್ನ ಮನೆಗೆ ಭೋಜನಕ್ಕೆ ಬರುತ್ತೇನೆಂದು ಹೇಳಿದರೆ ಸಾಯಂಕಾಲ 4 ಗಂಟೆಗಳವರೆಗು ಅನ್ನ ಇಡುವುದಿಲ್ಲವಾ! ನಮ್ಮ ಆಶ್ರಮದಲ್ಲಿ ನಿನಗೆ ಯಾವಾಗಾದರು ಅಷ್ಟು ತಡವಾಗಿ ಅನ್ನ ಇಟ್ಟಿದ್ದೇವಾ" ಎಂದು ಕೇಳಿದನು. ಆ ಮಾತಿಗೆ ಶಿಷ್ಯನು ತಡಪಡಿಸುತ್ತಾ ಇದರಲ್ಲಿ

ನನ್ನ ತಪ್ಪೇನು ಇಲ್ಲ ಸ್ವಾಮಿ ನನ್ನ ಹೆಂಡತಿಗೆ ಏನೂ ತಿಳಿದಿಲ್ಲ ಅಮಾಯಕಳು ಏನು ಹೇಳಿದರೂ ಅರ್ಥವಾಗುವುದಿಲ್ಲ. ಆದ್ದರಿಂದ ಆಲಸ್ಯವಾಗಿ ಮಾಡಿದ್ದಾಳೆ ಎಂದನು. ಆ ಮಾತು ಕೇಳಿದ ಸ್ವಾಮಿ ತಲೆಯಲ್ಲಾಡಿಸಿ "ಆಕೆಗೆ ಅರ್ಥವಾಗದೆ ಹೋದರೆ ನೀವು ತಿಳುವಳಿಕೆ ಹೇಳಬೇಕು ಎಂದನು. ಹಾಗೆ ತಿಳಿವಳಿಕೆ ಹೇಳಿರುವುದರಿಂದಾದರೂ ಆಲಸ್ಯವಾಗಿಯಾದರೂ ಮಾಡಿದ್ದಾಳೆ ಇಲ್ಲದೆ ಹೋದರೆ ಮಾಡುವವಳಲ್ಲ. ಮೇಲೆ ಹಾಗೆ ಇರುತ್ತಾಳೆ ಆದರೆ ಒಳಗೆ ಬಹಳ ಒಳ್ಳೆಯ ಮನಸ್ಸು. ಆದ್ದರಿಂದ ನಾನು ಏನು ಅನ್ನಲಾಗದೆ ಹೋದೆನೆಂದು ಶಿಷ್ಯನಂದನು. ಆಗ ಗುರು ನಕ್ಕು ನೋಡಪ್ಪ ಸುಮಾರು 2000 ವರ್ಷಗಳ ಪೂರ್ವದಲ್ಲೊಬ್ಬ ಹೆಸರು ಪಡೆದ ಗುರು ಹೀಗೆ ಹೇಳಿದ್ದಾನೆ. **"ಯಾರಾದರು ನನ್ನ ಬಳಿಗೆ ಬಂದು ತನ್ನ ತಾಯಿಯನ್ನು ಹೆಂಡತಿಯನ್ನು ಮಕ್ಕಳನ್ನು ಅಣ್ಣ ತಮ್ಮಂದಿರನ್ನು ಅಕ್ಕ ತಂಗಿಯರನ್ನು ತನ್ನ ಪ್ರಾಣವನ್ನು ಸಹ ದ್ವೇಷಿಸದಿದ್ದರೆ ಅವನು ನನ್ನ ಶಿಷ್ಯನಲ್ಲ"** ಎಂದನು. ಆ ಗುರುವಿನ ವಾಕ್ಯಾನುಸಾರ ನಾನು ಗುರುವೆ ಆಗಿರುವುದರಿಂದ ಅದೇ ಅನುಚರಣೆ ಅನುಸರಿಸಬೇಕು. ನೀನು ನನ್ನ ಬಳಿಗೆ ಬಂದು ತಪ್ಪು ಮಾಡಿದ ಹೆಂಡತಿಯನ್ನು ದ್ವೇಷಿಸದೆ ಸಮರ್ಥಿಸಿ ಮಾತನಾಡಿದ್ದೀಯ ಆದ್ದರಿಂದ ನೀನು ನನಗೆ ಶಿಷ್ಯನಾಗಲಾರೆ.

ಹೀಗೆ ಮೊದಲ ಶಿಷ್ಯನನ್ನು ತೇಲಿಸಿ ಹಾಕಿದ ಗುರು ಎರಡನೆ ಶಿಷ್ಯನನ್ನು ನೋಡಿ "ಏನಯ್ಯಾ ನಿನ್ನ ಮನೆಗೆ ಕರೆದುಕೊಂಡು ಹೋಗಿ ನಿಮ್ಮ ತಾಯಿ ಸಭ್ಯತೆಯಿಂದ ಮಾತನಾಡದೆ ಹೋದರೆ ನೀನು ಮೌನವಾಗಿ ಇರುತ್ತೀಯ ಬಂದ ವ್ಯಕ್ತಿ ಮುಂದೆ ಹಾಗೆ ನಿನ್ನನ್ನು ಕೋಪದಿಂದ ನೋಡುವುದು ಗದರಿಸಿ ಮಾತನಾಡುವುದು ಬಂದಿರುವ ವ್ಯಕ್ತಿಗೆ ಸಣ್ಣತನವಲ್ಲವೆ! ಏನು ಸಮಾಧಾನವೆಂದು ಕೇಳಿದನು. ಅದಕ್ಕೆ ಆ ಶಿಷ್ಯನು ನಮ್ಮ ತಾಯಿಯವರು ನಿಮ್ಮ ವಿಷಯವಾಗಿ ಕೋಪಿಸಿಕೊಳ್ಳಲಿಲ್ಲ ನಾನು ಬಜಾರಿನಲ್ಲಿ ಸಾಮಾಗ್ರಿಗಳನ್ನು ತರಲಿಲ್ಲವೆಂದು ಹಾಗೆ ಪ್ರವರ್ತಿಸಿದಳು ಎಂದನು. ಆ ಮಾತು ಕೇಳಿದ ಗುರು "ಬಂದ ವ್ಯಕ್ತಿ ದೊಡ್ಡವನೆಂಬ ಭಾವ ಸ್ವಲ್ಪವಿದ್ದಿದ್ದರೂ ಈತನು ಏನೆಂದುಕೊಳ್ಳುತ್ತಾನೊ ಎಂದು

ಸ್ವಲ್ಪವಾದರೂ ಯೋಚನೆ ಇರುತ್ತಿತ್ತು. ಅಂತಹ ದೊಡ್ಡ ಭಾವ ಸ್ವಲ್ಪವಾದರೂ ಇಲ್ಲ." ಆದ್ದರಿಂದ ಅವರು ಹಾಗೆ ಪ್ರವರ್ತಿಸಿದ್ದಾರೆ. ಅಂತಹ ಪ್ರವರ್ತನೆ ನಿನ್ನನ್ನು ದಂಡಿಸುವುದಾದರು ನಮ್ಮ ಮುಂದೆ ಪ್ರವರ್ತಿಸುವುದು ನಮ್ಮ ಬೆಲೆಗೆ ಸ್ವಲ್ಪವಾದರು ಮರ್ಯಾದೆ ಕೊಡದೆ ಹೋಗುವುದು, ನಿಮಗೆ ಹೇಗಿದ್ದರೂ ನಮಗೆ ಮಾತ್ರ ಪೂರ್ತಿ ಸಣ್ಣತನ. ನನಗೆ ನಡೆದ ಸಣ್ಣತನವನ್ನು ಕುರಿತು ನೀನು ಚಿಂತಿಸದೆ ಇರುವುದು ಶಿಷ್ಯನ ಲಕ್ಷಣವಲ್ಲ" ಎಂದನು. ಆಗ ಶಿಷ್ಯನು ಹೀಗಂದನು. "ಇಲ್ಲ ಸ್ವಾಮಿ! ನನಗು ಸಹ ಸ್ವಾಮಿ ಏನಾದರೂ ಅಂದು ಕೊಂಡಿದ್ದಾನೇನೊ ಎಂದು ನಮ್ಮವರನ್ನು ದಂಡಿಸಬೇಕೆಂದುಕೊಂಡೆನು. ಆದರೆ ಗುರುಗಳ ವಿಷಯವಾಗಿ ತಾಯಿತಂದೆಯರಿಂದ ತಗಾದೆಬಿದ್ದರೆ ಚೆನ್ನಾಗಿರುವು ದಿಲ್ಲವೆಂದುಕೊಂಡೆನು." ಆ ಮಾತಿಗೆ ಗುರುಗಳು ನಕ್ಕು "ನನ್ನ ವಿಷಯವಾಗಿ ತಗಾದೆ ಬೀಳದೆ ಹೋದರೆ ಆತ್ಮ ಬಂಧುವಾದ ನನಗಿಂತ ಶರೀರಬಂಧುಗಳಾದ ನಿಮ್ಮವರೇ ಹೆಚ್ಚೆಂಬ ಭಾವ ಹೊರಬೀಳುತ್ತದೆ. ನನಗೋಸ್ಕರ ನಿಮ್ಮ ಮನೆಯವರೊಂದಿಗೆ ಜಗಳಮಾಡಿದರು ಪರವಾಗಿಲ್ಲ. ಈ ವಿಷಯವಾಗಿ ಎರಡು ಸಾವಿರ ವರ್ಷಗಳ ಕೆಳಗೆ ಒಬ್ಬ ದೊಡ್ಡ ಗುರು ಹೀಗೆ ಹೇಳಿದ್ದಾನೆ. **"ನಾನು ಭೂಮಿ ಮೇಲೆ ಸಮಾಧಾನವನ್ನುಂಟು ಮಾಡಲು ಬಂದಿದ್ದೇನೆಂದು ನೀವಂದು ಕೊಳ್ಳುತ್ತಿದ್ದೀರಾ! ಅಲ್ಲ ಭೇದವನ್ನೇ ಉಂಟುಮಾಡಲು ಬಂದಿದ್ದೇನೆಂದು ನಿಮ್ಮಲ್ಲಿ ಹೇಳುತ್ತಿದ್ದೇನೆ. ಈಗಿನಿಂದ ಒಂದು ಮನೆಯಲ್ಲಿ ಐದು ಜನ ಬೇರೆಯಾಗಿ ಇಬ್ಬರಿಗೆ ವಿರೋಧವಾಗಿ ಮೂವರು, ಮೂವರಿಗೆ ವಿರೋಧವಾಗಿ ಇಬ್ಬರು ಇರುತ್ತಾರೆ. ತಂದೆ ಕುಮಾರನಿಗೆ ಕುಮಾರನು ತಂದೆಗೆ, ತಾಯಿ ಕುಮಾರಿಗೆ ಕುಮಾರಿ ತಾಯಿಗೆ, ಅತ್ತೆ ಸೊಸೆಗೆ, ಸೊಸೆ ಅತ್ತೆಗೆ ವಿರೋಧಿಗಳಾಗಿ ಇರುವರು"**. ಆ ದಿನ ಗುರುವಿನ ವಾಕ್ಯಾನುಸಾರ ಜ್ಞಾನ ಮಾರ್ಗವನ್ನು ಅನುಸರಿಸುವವರಿಗೆ ಹೀಗೆ ಭೇದಗಳು ಇರುತ್ತವೆ. ಹಾಗೆ ಜ್ಞಾನ ವಿಷಯವಾಗಿ ತಗಾದೆಪಡದವರು ಜ್ಞಾನ ಮಾರ್ಗದಲ್ಲಿ ಇಲ್ಲದಂತೇ, ಈ ಜ್ಞಾನ ಪದ್ಧತಿ ನಿನಗೆ ತೊಂದರೆ ಮಾಡುತ್ತದೆ. ಆದ್ದರಿಂದ ಇಂದಿನಿಂದ ಪ್ರಾಣವಿಲ್ಲದ ಚಿತ್ರಗಳಿಗೆ ಮುಗಿಯುತ್ತಾ ಒಳ್ಳೆಯದು ಕೆಟ್ಟದ್ದು ಹೇಳದ ಗೊಂಬೆಗಳಿಗೆ ಪೂಜೆ ಮಾಡಿಕೊ! ಅವುಗಳಿಂದ ಯಾವ ತೊಂದರೆ

ಇರುವುದಿಲ್ಲ ಎಂದು ಎರಡನೆ ಶಿಷ್ಯನನ್ನು ಹೆಚ್ಚರಿಸಿದ ಗುರು ಮೂರನೆ ಶಿಷ್ಯನೊಂದಿಗೆ ಮಾತನಾಡುವುದನ್ನು ಪ್ರಾರಂಭಿಸಿದನು.

ನಿನಗಿರುವ 150 ಎಕರೆಗಳಲ್ಲಿ ಒಂದು ಎಕರೆ ಗುರುದಕ್ಷಿಣೆ ಕೇಳಿದರೆ ನಮ್ಮವರು ಬೇಡವೆಂದಿದ್ದಾರೆ ಬೇಕಾದರೆ ಹತ್ತುಸಾವಿರ ಕೊಡುತ್ತೇನೆಂದು ಹೇಳುತ್ತೀಯಾ! ನಿನ್ನ ಎಕರೆ ಹೊಲ ತೆಗೆದುಕೊಂಡು ನಾನೇನು ಮಾಡುತ್ತೇನಯ್ಯಾ ನಿನಗೆ ಜ್ಞಾನ ಧನದ ಮೇಲೆ ಆಸೆ ಇಲ್ಲ. ಪ್ರಪಂಚ ಧನದ ಮೇಲೆ ನಿನಗೆ ಆಸೆ ಇದೆಯೆಂದು ಅದರ ಮುಂದೆ ಗುರುಜ್ಞಾನ ಏನು ಕಾಣಿಸದೆಂದು ತಿಳಿಸುವುದಕ್ಕೆ ನಿನ್ನನ್ನು ಹಾಗೆ ಕೇಳಿದೆನು. ನಿನಗಿರುವ ಆಸ್ಥಿಯಲ್ಲಿ ಇರುವ ಆಕಾಂಕ್ಷೆಯಿಂದ ನಿನಗೆ ಮೋಕ್ಷ ದೂರವಾಗಬಹುದು. ಈ ವಿಯಷವಾಗಿ ಎರಡು ಸಾವಿರ ವರ್ಷಗಳ ಕೆಳಗೆ ಒಬ್ಬಗುರು ಹೀಗೆ ಹೇಳಿದ್ದಾನೆ. **“ತಮ್ಮ ಆಸ್ಥಿಯಲ್ಲಿ ನಂಬಿಕೆ ಇರಿಸುವವರು ದೇವರ ರಾಜ್ಯದಲ್ಲಿ ಪ್ರವೇಶಿಸುವುದು ಎಷ್ಟೋ ದುರ್ಲಭ! ಧನವಂತನು ದೇವರ ರಾಜ್ಯದಲ್ಲಿ ಪ್ರವೇಶಿಸುವುದಕ್ಕಿಂತ ಒಂಟೆ ಸೂಜಿ ರಂಧ್ರದಲ್ಲಿ ತೂರುವುದು ಸುಲಭ”** ಆದ್ದರಿಂದ ಜ್ಞಾನ ತಿಳಿದುಕೊಂಡರೂ ನಿನ್ನ ಮಮಕಾರ ಜ್ಞಾನದ ಮೇಲೆಗಿಂತ ಎಕರೆ ಆಸ್ಥಿ ಮೇಲೆಯೆ ಹೆಚ್ಚಾಗಿ ಇದೆ. ಆದರೆ ಒಂದು ಜ್ಞಾಪಕದಲ್ಲಿಟ್ಟುಕೊ ದೈವಜ್ಞಾನಕ್ಕೆ ಉಪಯೋಗಪಡದ ಆಸ್ಥಿಯಾಗಲಿ, ಧನವಾಗಲಿ ನಿಷ್ಪ್ರಯೋಜನೆಯೆಂದು ತಿಳಿದುಕೊ.

ಇನ್ನು ನಾಲ್ಕನೆ ಶಿಷ್ಯನನ್ನು ನೋಡಿ ನನ್ನ ಶತ್ರುವಿನ ಮೇಲೆ ದಾಳಿ ಮಾಡೆಂದು ನಿನಗೆ ಹೇಳಿದರೆ ಸರಿಯೆಂದು ಒಪ್ಪಿಕೊಂಡು ನಂತರ ಮೆಲ್ಲನೆ ಜಾರಿಕೊಳ್ಳುತ್ತೀಯೇನಯ್ಯಾ  ಮೇಲಾಗಿ ಗುರುಗಳಿಗೆ ಕೋಪ ಜಾಸ್ತಿ ಆತನ ತಗಾದೆಗಳೊಳಗೆ ಹೋದರೆ ನಮಗೆ ಮರ್ಯಾದೆ ಇರುವುದಿಲ್ಲವೆಂದು ಗುರುಗಳು ಎಷ್ಟು ಜ್ಞಾನ ಹೇಳಿದರು ನಾವು ಕೆಲವು ಕೆಲಸಗಳು ಆಲೋಚಿಸಿ ಮಾಡಬೇಕೆಂದು ಇತರರೊಂದಿಗೆ ಅನ್ನುತ್ತೀಯ. ಗುರುಸೇವೆಗಳಲ್ಲಿ ಮೂರನೆ ಸೇವೆಯಾದ ಭಾವ ಸೇವೆಯಲ್ಲಿ ಗುರುವನ್ನು ತಾಯಿಯಂತೆ, ತಂದೆಯಂತೆ ಅಣ್ಣತಮ್ಮಂದಿರಂತೆ ಭಾವಿಸಿಕೊಳ್ಳಬೇಕೆಂದು ತಿಳಿಸಿಲ್ಲವೆ! ಆ ಭಾವ ನಿನ್ನಲ್ಲಿ ಇದೆಯಾ! ನಿನ್ನ ಅಣ್ಣನ

ಮೇಲೆ ನಿನ್ನ ತಂದೆ ಮೇಲೆ ಧ್ವಜವೆತ್ತಿದವರ ಮೇಲೆ ನೀನು ಒಡೆದಾಡುವುದಕ್ಕೆ ಹೋಗದೆ ಇರುತ್ತೀಯ. ಜ್ಞಾನ ಕಲಿತುಕೊಳ್ಳುವವರೆಗು ಗುರು ಅವಶ್ಯವೆಂದು ಕೊಳ್ಳುವ ನಿನ್ನಂತಹ ಶಿಷ್ಯರು ನನಗೆ ಬೇಕಿಲ್ಲ. ಇಂತವರನ್ನು ಕುರಿತು ಎರಡು ಸಾವಿರ ವರ್ಷಗಳ ದಿನದಂದು ಒಬ್ಬ ದೊಡ್ಡ ಗುರು ಹೀಗೆ ಹೇಳಿದ್ದಾನೆ. **"ಸ್ವಲ್ಪ ಕಾಲ ಅವರು ನಿಲ್ಲುತ್ತರಾಗಲಿ ಜ್ಞಾನ ಪರವಾಗಿ ಶ್ರಮವಾದರು ಹಿಂಸೆ ಯಾದರೂ ಉಂಟಾದರೆ ಅಭ್ಯಂತರಪಡುವರು"**. ಆ ದಿನ ಹೇಳಿದ ಆತನ ಮಾತುಗಳು ಕ್ರಮ ತಪ್ಪದಂತೆ ನೀನು ಹೇಳಿದ್ದೀಯ. ಜ್ಞಾನ ನಿಮಿತ್ತವಾಗಿ ಉಂಟಾಗುವ ಶ್ರಮವಾಗಲಿ, ಹಿಂಸೆಯಾಗಲಿ, ಸಂತೋಷವಾಗಿ ಎದುರಿಸಿ ಕೊಳ್ಳುವವರಿಗೆ ದೈವ ಸಾನ್ನಿಧ್ಯ ಲಭ್ಯವಾಗುತ್ತದೆಂದು ತಿಳಿದುಕೊ.

ಹಾಗೆ ಐದನೆ ಶಿಷ್ಯನನ್ನು ನೋಡಿ ನಿನ್ನನ್ನು ನನ್ನ ಬಳಿ ಸಂವತ್ಸರ ಕಾಲ ಇರು ಎಂದರೆ ನಮ್ಮವರನ್ನು ನಮ್ಮ ಮನೆಯನ್ನು ಬಿಟ್ಟು ಇರುವು ದಿಲ್ಲವೆನ್ನುತ್ತೀಯೇನಯ್ಯಾ. ನಾಳೆ ಎಲ್ಲರನ್ನು ಬಿಟ್ಟು ಮರುಜನ್ಮಕ್ಕೆ ಹೋಗಬೇಕಾಗಿ ಬಂದರೆ ಆಗ ಹೀಗೆ ಹೇಳುತ್ತೀಯಾ? ಗುರು ಆದೇಶಿಸಿದಾಗ ಏನನ್ನಾದರು ಬಿಟ್ಟು ಇರಬೇಕಾಗುತ್ತದೆ. ಜ್ಞಾನಕ್ಕಾಗಿ, ದೈವಕ್ಕಾಗಿ ಏನನ್ನಾದರು ಬಿಡುವಂತಹ ತ್ಯಾಗವಿರುವಾಗ ದೈವ ಸನ್ನಿಧಿಯನ್ನು ಸುಲಭವಾಗಿ ಸೇರುತ್ತೀಯ. ಈ ವಿಷಯವನ್ನು ಕುರಿತು ಪೂರ್ವದ ಎರಡು ಸಾವಿರ ವರ್ಷಗಳ ದಿನದಂದು ಪ್ರಕೃತಿಯನ್ನೇ ಶಾಸಿಸಿದ ಗುರು ಹೀಗೆ ಹೇಳಿದ್ದಾನೆ. **"ಮೋಕ್ಷ ಪರವಾಗಿ ಮನೆಯನ್ನಾದರು ಹೆಂಡತಿಯನ್ನಾದರು ಅಣ್ಣ ತಮ್ಮಂದಿರನ್ನಾದರು ತಾಯಿತಂ ದೆಯರನ್ನಾದರೂ ಮಕ್ಕಳನ್ನಾದರು ಬಿಟ್ಟು ಹಾಕಿದವನು ಇಹದಲ್ಲಿ ಬಹಳ ಹೆಚ್ಚು ಪರಮದಲ್ಲಿ ನಿತ್ಯ ಜೀವನವನ್ನು ಹೊಂದುವನೆಂದು ನಿಮ್ಮೊಂದಿಗೆ ನಿಶ್ಚಯವಾಗಿ ಹೇಳುತ್ತಿದ್ದೇನೆ."** ನೋಡಿದೆಯಾ ಮಹಾತ್ಮರು ಹೇಳಿದ ವಾಕ್ಯ. ನೀನು ಜ್ಞಾನವನ್ನು ತಿಳಿದು ಸಹ ಅದಕ್ಕೆ ಕಡಿಮೆ ಬೆಲೆ ಕೊಟ್ಟಿದ್ದೀಯ.

ಕಾಲುನೋವಿದ್ದರು ಬಹಳ ಶ್ರಮಪಟ್ಟು ಬಂದ ಆರನೇ ಶಿಷ್ಯನನ್ನು ನೋಡಿ ಮೆಲ್ಲನೆ ನಕ್ಕು ನಿನಗಿಷ್ಟವಾದವರು ಹೆಂಡತಿ ಮಗ ಎಂದು ಹೇಳಿದೆಯಲ್ಲ,

ನಾನಿಲ್ಲದೆ ಅವರಿರುವುದಿಲ್ಲ ಎಂದೆಯಲ್ಲ, ನಿನ್ನವರಿಗೆ ನಿನ್ನ ಮೇಲೆ ಅಷ್ಟು ಪ್ರೇಮವಿದೆಯಾ. ಹೀಗೆ ಕಾಲು ಮುರಿದು ಮೂಲೆಗೆ ನೂಕುವುದು ಪ್ರೇಮವೆನ್ನುತ್ತೀಯ! ನಿನ್ನ ಮಗ ಕಾಲು ಮುರಿದರೆ ನಿನ್ನ ಹೆಂಡತಿ ಅಡ್ಡ ಬರಲಿಲ್ಲವೇ. ನಿನ್ನ ಮೇಲೆ ಪ್ರೀತಿ ಇರುವುದಾದರೆ ಮಗನನ್ನು ದೂಷಿಸದೆ ಹೋಗಿದ್ದಾಳೆಯೆ. ನೋಡಲು ಬಂದ ಬಂಧುಗಳು ನಿನ್ನ ಮೇಲೆ ಪ್ರೀತಿ ಇರುವುದಾದರೆ ಇದು ನ್ಯಾಯ ಇದು ಅನ್ಯಾಯವೆಂದು ನಿನ್ನ ಮಗನನ್ನು ನಿಂದಿಸಲಿಲ್ಲವೆ, ಮೇಲಾಗಿ ಅವರು ನಮ್ಮ ಅಪ್ಪ ಈ ತಪ್ಪು ಕೆಲಸ ಮಾಡಿದ್ದರೆ ಹೊಡೆದಿದ್ದೇವೆಂದು ಇಲ್ಲದ ತಪ್ಪನ್ನು ಹೊರಿಸಿದರೆ ನೀನು ಎಂತವನೆಂದು ಯೋಚಿಸದೆ ಆ ತಪ್ಪು ಮಾಡಿದ್ದರೆ ಈ ಒದೆಗಳು ಹೊಡೆದಿದ್ದಾರೆಂದುಕೊಂಡು ನೋಡಿ ಹೋಗುತ್ತಾರಾ. ಇಂತವರಾ ನಿನಗೆ ಪ್ರಿಯವಾದವರು. ಇಷ್ಟು ನಡೆದರು ಅವರನ್ನು ದೂಷಿಸದೆ ಹೋಗಿದ್ದೀಯ ಆದ್ದರಿಂದ ಅವರಿಗೆ ನಿನ್ನ ಮೇಲಲ್ಲ. ನಿನಗೆ ಅವರ ಮೇಲೆಯೇ ಹೆಚ್ಚಿನ ಮಮಕಾರವಿದೆಯೆಂದು ಹೇಳಬಹುದು ಜ್ಞಾನ ಮಾರ್ಗಕ್ಕೆ ಇಂತಹ ಮಮಕಾರ ಪೂರ್ತಿ ವಿರುದ್ಧ. ಈ ವಿಷಯ ಗ್ರಹಿಸಿದ ಬುದ್ಧನು ಯೌವನ ಹೆಂಡತಿಯನ್ನು, ಶಿಶುದಶ ಕುಮಾರನನ್ನು ಬಿಟ್ಟು ಕಾಡಿಗೆ ಹೋದನು. ಇಲ್ಲದೆ ಹೋದರೆ ನಿನ್ನ ಹಾಗೆ ಬುದ್ಧನನ್ನು ಸಹ ಕಾಲು ಮುರಿದು ಮನೆಯಲ್ಲಿ ಕೂರಿಸುತ್ತಿದ್ದರು. ಈಗಲಾದರೂ ಅವರು ನಿನಗೆ ಶತ್ರುಗಳೆಂದು ತಿಳಿದುಕೊ, ಜ್ಞಾನಮಾರ್ಗದಲ್ಲಿ ಪ್ರವೇಶಿಸು, ಪ್ರತಿಯೊಬ್ಬನಿಗು ಅವನ ಮನೆಯಲ್ಲಿಯೇ ಶತ್ರುಗಳಿರುತ್ತಾರೆಂದು ಗ್ರಹಿಸು, ಅಂತವರು ನಿನಗೆ ವಿರುದ್ಧವಾಗಿ ಇರುತ್ತಾರಾಗಲಿ ಪ್ರೇಮ ಇರುವವರಲ್ಲವೆಂದು ಗ್ರಹಿಸು. ಇದರ ವಿಷಯವಾಗಿ ಎರಡು ಸಾವಿರ ವರ್ಷಗಳ ದಿನ ಒಬ್ಬ ದೊಡ್ಡ ಗುರು ತನ್ನ ಶಿಷ್ಯರೊಂದಿಗೆ ಹೀಗೆ ಹೇಳಿದನು. **"ತಾಯಿ ತಂದೆಯರಿಂದಲು ಸಹೋದರರಿಂದಲು ಬಂಧುಗಳಿಂದಲು ನೀವು ಅಪರಾಧಿಗಳಿಂತೆ ಒಪ್ಪಿಸಲ್ಪಡುತ್ತೀರ. ಅವರು ನಿಮ್ಮಲ್ಲಿ ಕೆಲವರನ್ನು ಸಾಯಿಸುವರು"**. ನೋಡಿದಿರಾ ಆಗಿನ ಅವತಾರ ಪುರುಷ ಹೇಗೆ ತನ್ನ ಶಿಷ್ಯರನ್ನು ಎಚ್ಚರಿಸಿದ್ದಾನೊ ಆದರೆ ಈ ದಿನ ನಮ್ಮಂತಹ ಗುರುಗಳು ಶಿಷ್ಯರನ್ನು ಏನು ದಂಡಿಸಲಾಗದೆ ಅವರು ವಕ್ರಮಾರ್ಗದಲ್ಲಿ ಹೋಗುತ್ತಿದ್ದರು

ನೋಡುತ್ತಾ ಇರಬೇಕಾಗಿ ಬಂದಿದೆ. ದಂಡಿಸಿದರೆ ಕೇಳುವ ಜ್ಞಾನವು ಸಹ ಕೇಳುವುದಿಲ್ಲವೆಂದು ಗುರುಗಳ ಭಾವ. ನಾನು ಹಾಗಲ್ಲದೆ ನನ್ನ ಶಿಷ್ಯರನ್ನು ಚೆನ್ನಾಗಿ ಮಾಡಬೇಕೆಂದು ನಿನ್ನನ್ನು ದಂಡಿಸುತ್ತಿದ್ದೇನೆ ನಿನಗೆ ನೋವು ಕೊಡುವವರು ನಿನಗೆ ಅಭಿಮಾನಿಗಳಲ್ಲ ಶತ್ರುಗಳು. ಅವರನ್ನು ಇನ್ನೂ ಆತ್ಮೀಯರಂತೆ ಭಾವಿಸಿ ನಂತರ ತೋರಿಸುತ್ತೇನೆಂದು ನನಗೆ ಹೇಳಿದ ನಿನಗೆ ನಾಚಿಕೆಯಿಲ್ಲ. ನಿನ್ನನ್ನು ದುಷ್ಪ್ರಚಾರ ಮಾಡಿದ ಅವನ ಮುಖವನ್ನು ಸಹ ನೀನು ನೋಡಬಾರದು ಎಂದು ದಂಡಿಸಿದ ಆ ಗುರು ಪಕ್ಕಕ್ಕೆ ತಿರುಗಿ ಏಳನೆ ಶಿಷ್ಯನನ್ನು ನೋಡಿ ಹೀಗೆ ಹೇಳಿದನು.

ನಾನು ಯಾವ ವೈದ್ಯಕ್ಕಾಗಿ ಔಷಧ ತಯಾರು ಮಾಡಲಿಲ್ಲ. ಆದರೂ ಅಂತಹ ನೆಪ ಹೇಳಿ ನನಗೆ ಶರೀರ ಅವಯವ ಅದರ ರಕ್ತ ಬೇಕೆಂದಿದ್ದೆನು. ಯಾವುದಕ್ಕೂ ಜಗ್ಗದೆ ಹಾಗೆಯೇ ಕೊಡುತ್ತೇನೆಂದು ಒಪ್ಪಿಕೊಂಡಿದ್ದಾನೆ ಈತನು, ಕೊನೆಗೆ ಕೊಡುವುದಕ್ಕು ಸಹ ಸಿದ್ಧವಾಗಿದ್ದಾನೆ. ಆದರೂ ನನಗೆ ಅವಶ್ಯಕತೆ ಇಲ್ಲ. ಇದೆಲ್ಲವೂ ನಿಮ್ಮನ್ನು ಪರೀಕ್ಷಿಸುವುದಕ್ಕಾಗಿ ಮಾಡಿರುವುದೆಂದು ತಿಳಿಯಿರಿ. ನಾನು ನಿಮಗೆ ಎಷ್ಟೋ ಜ್ಞಾನ ತಿಳಿಸಿದ್ದೇನೆ. ಅದೆಲ್ಲವು ಕೇಳಿದ ನೀವು ನನ್ನನ್ನು ಎಷ್ಟೋ ಹೊಗಳಿದ್ದೀರ. ನಿಮ್ಮ ಭಾವ ಮಾತುಗಳಲ್ಲಿಯೊ, ಕೈಗಳಲ್ಲಿಯೊ ಎಂದು ಪರೀಕ್ಷಿಸಿದೆನು. ಒಬ್ಬನ ಹತ್ತಿರ ಹೊರತು ಉಳಿದ ಆರು ಜನರ ಬಳಿ ಮಾತುಗಳಲ್ಲಿಯೆ ಇದೆ. ನಾನು ಬ್ರಹ್ಮ ವಿದ್ಯೆ ಕಲಿತ ಗುರು, ನಾನು ನಿಮಗೆ ಆತ್ಮ ಬಂಧು ನಿಮ್ಮ ತಾಯಿ ತಂದೆಯರಿಗೆ ನೀವು ಬಿಂಧು ಪುತ್ರರಾದರೆ ನನಗೆ ನೀವು ನಾದ ಪುತ್ರರು, ಶರೀರ ಬಂಧುಗಳಿಗಿಂತ ಆತ್ಮ ಬಂಧುವು ಎಷ್ಟೋ ಮೇಲು ಮಾಡುವವನು. ಆದರೂ ನೀವು ಅದನ್ನು ಗ್ರಹಿಸದೆ ಶರೀರ ಬಂಧುವಿಗೆ ಹೆಚ್ಚಿನ ಬೆಲೆ ಕೊಟ್ಟಿದ್ದೀರ. ಕಳೆದ ಚರಿತ್ರೆಯಲ್ಲಿ ಆತ್ಮ ಬಂಧುವಿಗೆ ಹೆಚ್ಚಿನ ಬೆಲೆ ಇರುತ್ತಿತ್ತು. ಕೇವಲ ಪ್ರಪಂಚ ವಿದ್ಯೆ ಕಲಿಸಿದ ದ್ರೋಣನಿಗೆ ಶತ್ರುವಾದ ಒಬ್ಬ ರಾಜನನ್ನು ಕಟ್ಟಿಕೊಂಡು ತರಬೇಕೆಂದು ಹೇಳಿದರೆ ಗುರುದಕ್ಷಿಣೆಯಾಗಿ ಅರ್ಜುನನು ತಂದುಕೊಟ್ಟಿದ್ದಾನೆ. ಏಕಲವ್ಯನು ತನ್ನ ಕೈ ಬೆರಳನ್ನು ಗುರುದಕ್ಷಿಣೆ

ಯಾಗಿ ಕತ್ತರಿಸಿ ಕೊಟ್ಟನು. ಇನ್ನು ದೈವ ಮಾರ್ಗಕ್ಕೋಸ್ಕರ ಪ್ರಹ್ಲಾದನು ಅವರ ತಂದೆಯನ್ನೆ ಎದುರಿಸಿದನು. ಮಚ್ಛಿಂದ್ರ ತನ್ನ ಹೆಂಡತಿಯನ್ನು ಬಿಟ್ಟನು. ಬುದ್ಧನು ತನ್ನ ಕುಮಾರನನ್ನು, ತಾಯಿ ತಂದೆಯನ್ನು, ಹೆಂಡತಿಯನ್ನು ಬಿಟ್ಟು ಹೋದನು. ತುಕಾರಾಮ್ ತನ್ನ ವ್ಯಾಪಾರವನ್ನು, ಮನೆಯನ್ನು, ಆಸ್ಥಿಯನ್ನು ಬಿಟ್ಟನು. ಎಷ್ಟೋ ಮಹಾಪುರುಷರು ಇದು ಮಾರ್ಗವೆಂದು ಸೂಚಿಸಿದರು. ಆದರೂ ನೀವು ಮೊದಲಿನಿಂದ ನಿಮ್ಮ ನಿಮ್ಮ ಶರೀರ ಬಂಧುಗಳ ಮೇಲೆಯೆ ಮಮಕಾರ ಬೆಳೆಸಿಕೊಂಡು ಆತ್ಮಬಂಧುಗಳನ್ನು ಗುರ್ತಿಸದೆ ಹೋಗಿದ್ದೀರ. ನೀವು ಪುರುಷ ರಾಗಿಯು ಸಹ ಪ್ರತಿಯೊಂದಕ್ಕು ಅಸ್ವತಂತ್ರರಂತೆ ಹೇಳಿಕೊಳ್ಳುತ್ತಾ ಮನೆಯವರಿಗೆ ಭಯಪಡುವವರಂತೆ ಹೇಳುತ್ತಾ ಬಂದಿದ್ದೀರ. ನೀವು ಗಂಡಸರಾಗಿ, ಸಂಪಾದನೆ ಮಾಡಿ ಕೆಲವರನ್ನು ಪೋಷಿಸುವ ಸಾಮರ್ಥ್ಯವಿದ್ದು, ಜ್ಞಾನ ವಿಷಯಗಳ ಬಗ್ಗೆ ಇತರರಿಗೆ ಭಯಪಡುವುದು ನಿಮ್ಮೊಳಗಿನ ಅಜ್ಞಾನಕ್ಕೆ ನಿದರ್ಶನ. ನಿಮಗಿಂತ ಸ್ತ್ರೀ ಆದ ಮೀರಾಬಾಯಿ ಯಾವ ಸ್ವತಂತ್ರ ಇಲ್ಲದವಳು, ಹೆಂಗಸಾಗಿ ಸ್ವತಂತ್ರ ಇಲ್ಲದವಳಾಗಿ ಚಿಕ್ಕ ವಯಸ್ಸಿದ್ದು ಸಹ ದೈವಮಾರ್ಗದ ಕಡೆ ಹೇಗೆ ಧೈರ್ಯವಾಗಿ ನಡೆದುಕೊಂಡಿದ್ದಾಳೊ ಹೇಳುತ್ತೇನೆ ಕೇಳಿರಿ. ಆಕೆಯ ಚರಿತ್ರೆಯನ್ನು ನೋಡಿ ನೀವು ಜ್ಞಾನ ತಂದುಕೊಳ್ಳಿ.

ಶ್ರೀಕೃಷ್ಣ ಭಕ್ತಳಾದ ಮೀರಾ ನಿತ್ಯವೂ ಆತನ ಭಕ್ತಿಕೀರ್ತನೆಗಳು ಹಾಡಲು ಸಹ ಸ್ವತಂತ್ರ ಇಲ್ಲದವಳಾಗಿ ಮಲುಗುವ ಸಮಯದಲ್ಲಿ ಕೃಷ್ಣಗಾನ ಮಾಡುತ್ತಿದ್ದಳು. ಆದರೂ ಗಂಡನಿಗೆ, ಮೈದುನನಿಗೆ, ಮನೆಯಲ್ಲಿನ ಅತ್ತೆಗೆ, ಹೆಣ್ಣುಮಗಳಿಗೆ ಸರಿಹೋಗುತ್ತಿರಲಿಲ್ಲ. ಆ ದಿನಗಳಲ್ಲಿ ಮೀರಾ ಕೃಷ್ಣ ದೇವಾಲಯಕ್ಕೆ ಹೋಗುತ್ತಿದ್ದಳು. ರಾಜ ಪುತ್ರಿಯಾಗಿರುವುದರಿಂದ ಆಕೆಗೆ "ಸಿತಾರ" ಬಾರಿಸುವುದಕ್ಕೆ ಬರುತ್ತಿತ್ತು. ಆಕೆ ಭಕ್ತರೊಂದಿಗೆ ಸೇರಿ ಆಗಾಗ ಭಜನೆ ಮಾಡುತ್ತಿದ್ದಳು. ಇನ್ನೇನಿದೆ ಹೆಣ್ಣುಮಗಳಾದ ಉದಾದೇವಿ ಎಷ್ಟೋ ಪ್ರಚಾರಗಳು ಮಾಡಿದ್ದಾಳೆ. ಭಕ್ತರೆನ್ನುವ ಹೆಸರಿನ ವಂಚಕರಾದವರೊಂದಿಗೆ ಆಕೆ ಸಂಬಂಧಗಳು ಇಟ್ಟುಕೊಳ್ಳುತ್ತಿದ್ದಾಳೆಂದು ಭೋಜನಿಗೆ ಚಾಡಿ ಹೇಳಿದಳು. ಆತನು ಸ್ವಲ್ಪ ಸಾತ್ವಿಕನು. ಹೆಂಡತಿಯಲ್ಲಿ

ಪ್ರೇಮಾದರಗಳು ಇರುವವನು. ಮೊದಲು ಸಹನೆಯಿಂದಿದ್ದನು. ಆದರೆ ದಿನದಿನವೂ ತಾಯಿ, ಸೋದರಿ ಅತನಿಗೆ ಚಾಡಿ ಹೇಳುತ್ತಿದ್ದರು. ಕೃತಕ ಸಾಕ್ಷಿಗಳನ್ನು ಕಲ್ಪಿಸಿದರು. ಗಂಡನು ಮೀರಾ ಪ್ರವರ್ತನೆಯನ್ನು ಶಂಖಿಸುವ ಪರಿಸ್ಥಿತಿಗೆ ಬಂದನು. ಒಂದು ದಿನ ಉದಾದೇವಿ ಆತನು ಕೃಷ್ಣಾಲಯಕ್ಕೆ ಬಂದರು. ಆಲಯದ ದ್ವಾರಗಳು ಮುಚ್ಚಲ್ಪಟ್ಟಿದ್ದವು. ಒಳಗೆ ಮೀರಾ ಒಬ್ಬಳೆ ವಿಗ್ರಹದ ಎದುರಿಗೆ ಕುಳಿತು ಭಜನೆ ಮಾಡುತ್ತಿದ್ದಳು. ಆಕೆ ಆವೇಶದಿಂದ ನಡು ನಡುವೆ "ಗಿರಿಧರ" ನೊಂದಿಗೆ ಮಾತನಾಡುತ್ತಿದ್ದಳು. ಆಕೆ ಆತನನ್ನು ಭಿನ್ನ ಭಿನ್ನವಾದ ಪ್ರಶ್ನೆಗಳು ಕೇಳುತ್ತಿದ್ದಳು. ಯಾವುದೋ ಪುರುಷ ಕಂಠ ಆ ಪ್ರಶ್ನೆಗಳಿಗೆ ಉತ್ತರ ಕೇಳಿಬರುತ್ತಿತ್ತು. ಉದಾದೇವಿ ಭೋಜ ಬಾಗಿಲುಗಳಿಗೆ ಕಿವಿಗಳು ಕೊಟ್ಟು ಆಲಿಸುತ್ತಿದ್ದಾರೆ. ಭೋಜನ ಅನುಮಾನ ಧೃಢವಾಯಿತು. ಆತನು ಬಾಗಿಲುಗಳನ್ನು ತಳ್ಳಿಕೊಂಡು ಒಳಗೆ ಬಂದನು. ಇಲ್ಲಿಯವರೆಗು ಕೇಳಿಸಿದ ಪುರುಷ ಕಂಠ ಯಾವುದು? ಎಂದು ಆತನು ಆಲಯವನ್ನೆಲ್ಲ ಜಾಲಾಡಿದನು. ಒಂದು ಗಂಡು ಹುಳ ಇಲ್ಲ. ಆತನು ಸ್ಥಬ್ದನಾಗಿ ಹೆಂಡತಿ ಎದುರಿಗೆ ನಿಂತನು. ಆಕೆ ಭೋಜನ ಅಭಿಪ್ರಾಯವನ್ನು ಗ್ರಹಿಸಿದಳು. ಪಕ್ಕದಲ್ಲಿ ಉದಾದೇವಿ ಇದ್ದಾಳೆ. ಮೀರಾ ಕೃಷ್ಣ ಪ್ರತಿಮೆಯನ್ನು ತೋರಿಸಿ ನನ್ನೊಂದಿಗೆ ಇಲ್ಲಿಯವರೆಗು ಮಾತನಾಡುತ್ತಿದ್ದ ಗಂಡಸನು ಈತನೆ. ಅವನನ್ನು ಕೈಲಾದರೆ ಸಾಯಿಸೆಂದು ಅಳುತ್ತಾ ಹೇಳಿದಳು. ಆ ಅಳುವಿನಲ್ಲೆ ಆಕೆ ಮೂರ್ಛೆ ಹೋದಳು. ಭೋಜನ ಮನಸ್ಸು ನೀರಾಯಿತು. ಉದಾದೇವಿ ಪಶ್ಚಾತ್ತಾಪ ಪಟ್ಟಳು. ಆದರೆ ಆ ಸದ್ಭಾವ ಕ್ಷಣಿಕ. ಆಕೆ ಅತ್ತಿಗೆಯನ್ನು ಮುದ್ದಾಡಿದಳು. ಆಕೆಗೆ ತಾತ್ಕಾಲಿಕವಾಗಿ ಅತ್ತಿಗೆ ಮೇಲೆ ಪ್ರೀತಿ ಆಧಾರಗಳು ಏರ್ಪಟ್ಟವು. ಅವನನ್ನು ತಿಳಿಸುವ ಚೇಷ್ಟಾ ವಿಶೇಷವೆ ಚುಂಬನ. ಆದರೆ ಭೋಜ ಪವಿತ್ರ ಪ್ರವರ್ತನಾ ವತಿಯಾದ ತನ್ನ ಹೆಂಡತಿಯನ್ನು ಶಂಖಿಸಿರುವುದಕ್ಕಾಗಿ ಒಂದು ಸ್ವಲ್ಪ ಅಸಂತೃಪ್ತಿ ಆಗಿದೆ. ಆದರೆ ಅದೂ ಕ್ಷಣಿಕವೆ. ಅನೇಕಾಲೋಚನೆಗಳು ಆತನ ಮನಸ್ಸಿನಲ್ಲಿ ಓಡಾಡತೊಡಗಿದವು. ಆತನು ಮನೆಗೆ ಹೋದನು. ಮೀರಾ ಭಜನೆ ಮುಗಿಸಿ ಕೋಣೆಯಲ್ಲಿ ಪ್ರವೇಶಿಸಿದಳು. ಗಂಡ ಮತ್ತೆ ಆವೇಶಿತನಾದನು. ಆತನು ಖಡ್ಗವನ್ನು ಹಿಡಿದುಕೊಂಡು ಆಕೆ ಕೋಣೆಗೆ ಪ್ರವೇಶಿಸಿದನು. ಮೀರಾ ಮೈಮರೆತು

ನಿದ್ರಿಸುತ್ತಿದ್ದಳು. ಆ ಮುಖವನ್ನು ನೋಡಿದಾಗ ಆತನಿಗೇನೊ ಮನಸ್ಸು ಬದಲಾಯಿತು. ಆತನು ನಿರ್ಮಲವಾಗಿ ಹಿಂದಕ್ಕೆ ಬಂದನು. ಅಂದಿನಿಂದ ತನ್ನ ಹೆಂಡತಿಗೆ ಹುಚ್ಚು ಇಡಿದಿದೆಯೆಂದು ಆತನ ನಂಬಿಕೆ. ಆಕೆ ಮನಸ್ಸಿಗೆ ಕಷ್ಟಗಳು ಕಲ್ಪಿಸುವ ಕೆಲವು ವಿಶೇಷಗಳು ನಡೆದಿದ್ದವು. ಆಕೆ ತಂದೆ ಗತಿಸಿದನು. ಆ ರಾಜ್ಯದಲ್ಲಿ ಸಮಸ್ಯೆಗಳು ಹೆಚ್ಚಿದವು. ಕಡೆಗೆ ರಾಜ್ಯವೇ ಉಳಿಯದಂತೆ ಹೋಯಿತು. ಮೀರಾಬಾಯಿ ಮನಸ್ಸಿನಲ್ಲಿ ಇವು ಅಲ್ಪ ಪದಾರ್ಥಗಳು. ಗಂಡ ಆಕೆ ಮಾನಸಿಕ ಸ್ಥಿತಿಯಲ್ಲಿ ಇಲ್ಲವಾದ್ದರಿಂದ ಈ ಸನ್ನಿವೇಶಗಳಿಂದ ಆಕೆಗೆ ಮಾನಸಿಕಾರೋಗ್ಯ ಕೆಟ್ಟುಹೋಯಿತೆಂದು ತಿಳಿದನು. ಮೀರಾಗೆ ಹುಚ್ಚು ಇಡಿದಿದೆಯೆಂಬ ಗಂಡನ ವಾಕ್ಯವನ್ನು ಲೋಕವು ನಂಬಲಿಲ್ಲ. ಅವರ ದೃಷ್ಠಿ ದೋಷೈಕ ದರ್ಶಿ. ಕೊನೆಗೆ ಆತನು ಆಕೆಗೆ ಅಂತಃಪುರ ಸಮೀಪದಲ್ಲಿಯೆ ಒಂದು ಕೃಷ್ಣಾಲಯವನ್ನು ಕಟ್ಟಿಸಿಕೊಟ್ಟನು. ಆಕೆ ಆ ಗುಡಿಯಲ್ಲಿ ಭಜನೆ ಕೀರ್ತನೆಗಳು ಮಾಡುತ್ತಿದ್ದಳು. ಆಕೆ ಪದ ರಚನೆಗಳನ್ನು ತಾನೇ ಬರೆಯುವುದು ಪ್ರಾರಂಭಿಸಿದಳು. ಆವೇಶದಿಂದ ಅವು ಹೃದಯದಿಂದ ಬರುತ್ತಿದ್ದವು. ಆ ಪದ ಮಾಧುರ್ಯ ಕೃಷ್ಣ ಪರಮಾತ್ಮನನ್ನೇ ಮುಗ್ದನನ್ನಾಗಿ ಮಾಡುತ್ತಿತ್ತು. ಸಂಗೀತದಲ್ಲಿ ವಿಶೇಷವಾದ ಪ್ರಾವೀಣ್ಯತೆ ಇರುವುದರಿಂದ ಹೊಸ ಹೊಸ ರಾಗಗಳಲ್ಲಿ ಆಕೆ ಪದಗಳನ್ನು ಸೃಷ್ಠಿಸಿದಳು. ಕಾಲಕ್ರಮೇಣ ಆಕೆ ಕೀರ್ತಿ ದೇಶದಲ್ಲಿಯೆ ಹೆಚ್ಚಾಯಿತು. ಆ ಕೀರ್ತಿ "ತಾನ್‌ಸೇನ್" ಕಿವಿಯಲ್ಲಿ ಸಹ ಬಿದ್ದಿತು. ಆಗ ಆತನು ಸಂಗೀತ ಸಾಮ್ರಾಜ್ಯಕ್ಕೆ ಚಕ್ರವರ್ತಿ. ಅಕ್ಬರ್ ಸಾರ್ವಭೌಮನು ಸಹ ಸ್ವತಃವಾಗಿ ಆಕೆ ಸಂಗೀತವನ್ನು ಕೇಳಬೇಕೆಂದು ಅಕಾಂಕ್ಷಿಸಿದನು. ಆದರೆ ಆಕೆಯನ್ನು ದರ್ಶಿಸುವುದು ಹೇಗೆ? ಚಿತ್ತೂರು ರಾಜರು ಅವರಿಗೆ ಆಗರ್ಭ ಶತ್ರುಗಳು. ಆದರೂ ಅಕ್ಬರು ಮಹಾ ಸಾಹಸವಂತರಾದ್ದರಿಂದ ಅವರೊಂದು ಉಪಾಯವನ್ನು ಆಲೋಚಿಸಿದರು. ಆಕೆ ಭಜನೆ ಮಾಡುವಾಗ ಎಷ್ಟೋ ಜನ ಸಾಧುಗಳು ಮೀರಾಳೊಂದಿಗೆ ಸೇರಿ ಹಾಡುತ್ತಿದ್ದರು. ಅವರು ಭಿಕ್ಷಕರು ದೇಹಾಭಿಮಾನವರ್ಜಿ ತರು ಅಂತವರೊಂದಿಗೆ ಆಕೆ ಮಾತನಾಡುತ್ತಿದ್ದಳು. ಅಕ್ಬರ್ ಚಕ್ರವರ್ತಿ ಆಕೆ ದರ್ಶನಕ್ಕಾಗಿ ಭಿಕ್ಷುಕನ ವೇಷ ಧರಿಸಿದ್ದನು. 'ತಾನ್ ಸೇನ್' ಸಹ ಒಬ್ಬ

ಭಿಕ್ಷುಕನಾಗಿದ್ದಾನೆ ಅವರಿಬ್ಬರೂ ಗಾನ ಭಿಕ್ಷೆಗಾಗಿ ಆಕೆ ಹತ್ತಿರಕ್ಕೆ ಹೊರಟರು. ಮೀರಾ ಸೌಂದರ್ಯ ಜಗನ್ಮೋಹಕ. ಆಕೆ ಕೃಷ್ಣ ಪರಮಾತ್ಮನ ಎದುರುಗಡೆ ರಾಧಾದೇವಿಯಂತೆ ಹಾಡುತ್ತಿದ್ದಳು. ಆ ಕಂಠದಲ್ಲಿ ಕೃಷ್ಣ ವೇಣುಗಾನ ಮಾಧುರ್ಯಗಳಿವೆ. ಆ ಭಜನೆ ಸಾಗುತ್ತಿರುವವರೆಗು ತಾನ್‌ಸೇನ್, ಅಕ್ಬರರು ರಸಸಮುದ್ರದಲ್ಲಿದ್ದಾರೆ. ಭಜನೆ ಮುಗಿದ ನಂತರ ಅಕ್ಬರ್‌ಚಕ್ರವರ್ತಿ ಆಕೆಯ ಪಾದಗಳನ್ನು ಸ್ಪರ್ಶಿಸಿ ನಮಸ್ಕಾರ ಮಾಡಿದನು. ಅಕ್ಬರ್ ಮಹಾಮನಸ್ವಿ ಭಾರತ ದೇಶದ ಚರಿತ್ರೆಯಲ್ಲಿ ವಿಚಿತ್ರವಾದ ಚಕ್ರವರ್ತಿ. ಆತನು ಆಕೆಗೊಂದು ರತ್ನಗಳ ಹಾರವನ್ನು ಕೊಟ್ಟನು. ಅದನ್ನು ಆಕೆ ಸ್ವೀಕರಿಸಲಿಲ್ಲ. ನನಗೇಕೆ ಎಂದಳು, ಕೃಷ್ಣ ಪರಮಾತ್ಮನಿಗೆ ಸಮರ್ಪಿಸಿರೆಂದು ಆತನು ವಿನಯ ಪೂರ್ವಕವಾಗಿ ಹೇಳಿದನು. ಆಕೆ ಆ ಹಾರವನ್ನು ರಾಧಾಕೃಷ್ಣರ ಪಾದಗಳ ಬಳಿ ಹಾಕಿದಳು. ಕಾಷಾಯಾಂಬಾರ ಧಾರಿಯಾದ ಭಿಕ್ಷುಕನು ಯಾರು? ರತ್ನಗಳ ಹಾರವೇನು? ಈ ಕಥೆ ಆ ಊರಿನಲ್ಲಿ ಹರಡಿಕೊಂಡಿತು. ಬಂದವನು ಅಕ್ಬರ್ ಚಕ್ರವರ್ತಿ ಎಂಬ ವಿಷಯ ಹೊರಬಿದ್ದಿತು. ಇದು ಭೋಜನಿಗೆ ಮರಣವೇಧನೆಯಾಯಿತು. ಆದಿನ ಹಿಂದೂ ಮುಸ್ಲಿಮರ ನಡುವೆಯಿದ್ದ ದ್ವೇಷ ಅಷ್ಟಿಷ್ಟಲ್ಲ. ಅಕ್ಬರ್ ಚಕ್ರವರ್ತಿ ಪಾದಗಳನ್ನು ಸ್ಪರ್ಶಿಸುವುದರಿಂದ ಆಕೆ ಶರೀರವೆಲ್ಲ ಕಳಂಕಿತವಾಗಿ ಹೋಗಿದೆಯೆಂದು ಗಂಡ ತಿಳಿದನು. ಆಕೆಯನ್ನು ಆತನು ಏಕೊ ವಧಿಸಲಿಲ್ಲ. ಗಂಡ ಮೀರಾಳನ್ನು ಹೊರಹಾಕಿದನು. ಇನ್ನೇನಿದೆ ಆಕೆ ಬೀದಿಯಲ್ಲಿ ಬಿದ್ದಳು. ಇತರರ ಪಾಲಿಗೆ ಅದು ಮಹಾಕಷ್ಟ. ಆಕೆ ಪಾಲಿಗೆ ಅದು ಪರಮ ಸಂತೋಷ. ಇದ್ದ ಸ್ವಲ್ಪ ಬಂಧವೂ ಸಹ ಬಿಟ್ಟುಹೋಯಿತು. ಮೀರಾ ಬೀದಿಗಳಲ್ಲಿ ಕೃಷ್ಣ ಸಂಕೀರ್ತನೆ ಮಾಡುತ್ತಾ ರಸಮುಗ್ಧ ಹೃದಯದಿಂದ ಹಾಡುವುದಕ್ಕೆ ಆರಂಭಿಸಿದಳು ಆಕೆಯ ಗೀತೆಗಳಿಂದ ಆಕರ್ಷಿತರಾಗಿ ನೂರು ಮಂದಿ ಭಕ್ತರು ಆಕೆ ಹಿಂದೆ ಬೀಳುತ್ತಿದ್ದರು. ಅತಿ ಪ್ರಯಾಸ ಪ್ರಯಾಣಗಳಿಂದ ಮೀರಾ ಬೃಂದಾವನವನ್ನು ಸೇರಿದಳು. ಆ ಬೃಂದಾವನದಲ್ಲಿನ ಪ್ರತಿ ಸ್ಥಳವನ್ನು ಕೃಷ್ಣಪಾದ ತಾಕಿ ಪವಿತ್ರವಾಗಿದೆ. ಕೃಷ್ಣ ವಿರಹಿತಳಾದ ರಾಧೆಯಂತೆ ಆ ಜಾಗಗಳಲ್ಲಿ ಹುಚ್ಚಿಯಂತೆ ತಿರುಗುತ್ತಿದ್ದಳು. ಭಜನೆಯೆ ಆಕೆ ಸಾಧನೆ, ಕಣ್ಣೀರೆ ಪೂಜೆ, ಆತ್ಮಾರ್ಪಣೆಯೆ ನೈವೇದ್ಯ ಆ

ಮಹಾ ವ್ಯಕ್ತಿಗೆ ದೇವತೆಗಳೆ ನಮಸ್ಕರಿಸುತ್ತಿದ್ದರು. ಆಗ ಬೃಂದಾವನದಲ್ಲಿ ಒಂದು ರಸವರ್ತನೆ ಸಂಘಟನೆ ನಡೆಯಿತು. ಆಗ ಅಲ್ಲಿ 'ರೂಪಗೊಸ್ವಾಮಿ' ಎಂಬ ಭಕ್ತನು ಇದ್ದನು. ಈತನು ವಲ್ಲಭ ಸಾಂಪ್ರದಾಯಕ್ಕೆ ಸೇರಿದ ಪೀಠಾಧಿಪತಿ. 'ವಲ್ಲಭಾಚಾರ್ಯನು' ನಮ್ಮ ಕೃಷ್ಣದೇವರಾಯರ ಸಮಕಾಲೀಕನು ಆಂಧ್ರನು, ಮಹಾಪಂಡಿತನು. ಪ್ರೇಮ ಪ್ರಧಾನವಾದ ಗೋಪಿಕಾ ಭಕ್ತಿಯನ್ನು ಆತನು ಹೆಚ್ಚಾಗಿ ಪ್ರಚಾರ ಮಾಡಿದ್ದನು. ಉತ್ತರ ಹಿಂದೂ ಸ್ಥಾನದಲ್ಲಿ ಆತನಿಗೆಷ್ಟೋ ಕವಿಗಳು ಶಿಷ್ಯರಾದರು. ಹಿಂದಿ ಸಾಹಿತ್ಯ ರಂಗದಲ್ಲಿ ಕೃಷ್ಣ ಭಕ್ತಿಗೆ ಪ್ರಾಧಾನ್ಯ ಬರುವುದಕ್ಕೆ ಈತನೇ ಮೂಲಕಾರಣ ಅನ್ನಬಹುದು. ರೂಪಗೊಸ್ವಾಮಿ ಎಂಬಆತನಿಗೆ ಸ್ತ್ರೀಯರೆಂದರೆ ಭಯ ಅವರನ್ನು ನೋಡಿದರೆ ಅವರ ಸೌಂದರ್ಯದಿಂದ  ತನ್ನ ಮನಸ್ಸು ಪತಿತವಾಗುತ್ತದೇನೊಯೆಂದು ಆತನು ಅವರ ದರ್ಶನವನ್ನೆ ನಿಷೇಧಿಸಿದ್ದನು. ಮೀರಾಬಾಯಿ ಆತನನ್ನು ನೋಡಲು ಹೋದಳು ಮಾರ್ಗ ಮಧ್ಯದಲ್ಲಿ ಆಕೆಯನ್ನು ಶಿಷ್ಯರು ತಡೆಗಟ್ಟಿ ನಮ್ಮ ಗುರುವನ್ನು ನೋಡಲು ಅವಕಾಶವಿಲ್ಲೆಂದರು ಕಾರಣವೇನೆಂದು ಆಕೆ ಕೇಳಿದಳು. ನಮ್ಮ ಗುರು ಸ್ತ್ರೀಯರ ಮುಖವನ್ನು ನೋಡುವುದಿಲ್ಲವೆಂದು ಅವರು ಹೇಳಿದರು. ಮೀರಾ ಪಕಪಕನೆ ನಕ್ಕಳು. **"ಇಲ್ಲಿಯವರೆಗು ಕೃಷ್ಣ ಪರಮಾತ್ಮ ಒಬ್ಬನೇ ಪುರುಷನೆಂದುಕೊಳ್ಳುತ್ತಿದ್ದೆನು ಇಂದಿಗೆ ನಿಮ್ಮ ಗುರುವೊಬ್ಬನು ಪುರುಷ ತಯಾರಾಗಿದ್ದಾನೆಂಬ ಮಾತು. ಪ್ರಕೃತಿಗೆ ಒಳಪಟ್ಟಿರುವವರು ಪುರುಷರಾದರೂ ಸ್ತ್ರೀಯರಾದರು ನನ್ನ ದೃಷ್ಟಿಗೆ ಸ್ತ್ರೀಯರೆ."** ಆಕೆ ಮತ್ತೆ ನಕ್ಕಳು ಈ ವಿಷಯ ರೂಪಗೊಸ್ವಾಮಿಗೆ ತಿಳಿಯಿತು. ಆತನು ತನ್ನ ಅಜ್ಞಾನಕ್ಕೆ ಎಷ್ಟೋ ಬಾಧೆ ಪಟ್ಟನು. ಆಕೆಗೆ ದರ್ಶನ ನೀಡಿ ಕ್ಷಮಾಪಣೆಯನ್ನು ಹೇಳಿಕೊಂಡನು. ಬೃಂದಾವನ ದಲ್ಲಿ ಮಹಾಭಕ್ತರೆಷ್ಟೋ ಆಕೆಗೆ ಶಿಷ್ಯರಾದರು. ಮೀರಾಳ ಕೀರ್ತಿ ದೇಶದೇಶಗಳಿಗು ಹಬ್ಬಿತು. ಆಕೆಯ ಬಗ್ಗೆ ತಾನು ಮಾಡಿದ ಅಪ ಪ್ರಚಾರಕ್ಕೆ ಪತಿ ಪಶ್ಚಾತ್ತಾಪ ಪಟ್ಟನು. ಆತನು ಭಿಕ್ಷುಕ ವೇಷದಲ್ಲಿ ಬೃಂದಾವನಕ್ಕೆ ಬಂದನು. ಒಂದು ದಿನ ಆತನು ಮೀರಾಳನ್ನು ಭಿಕ್ಷೆ ಕೇಳಿದನು. ಆಕೆ ಭಿಕ್ಷೆ ಹಾಕಲು ಹೋದಳು ಆತನು ಚಿತ್ರವಾದ ಭಿಕ್ಷೆ ಬೇಕೆಂದನು. ಅದೇನೆಂದು ಆಕೆ ಕೇಳಿದಳು ಆಕೆ ಮತ್ತೆ ಚಿತ್ತೂರಿಗೆ

ಬರಬೇಕೆಂದು ಆತನು ಕೇಳಿದನು. ಭಿಕ್ಷುಕನಾಗಿ ಬಂದವನು ತನ್ನ ಗಂಡನೆಂದು ಗ್ರಹಿಸಿದ ಆಕೆ ಮತ್ತೆ ಮಾತನಾಡದೆ ಸಮ್ಮತಿಸಿದಳು. ಆ ಜಗಜ್ಯೋತಿ ಚಿತ್ತೂರಿಗೆ ಬಂದಳು ಆಕೆ ಬಂದ ಸ್ವಲ್ಪ ದಿನಗಳಿಗೆ ಗಂಡ ಮರಣಿಸಿದನು. ಆಗ ಮೀರಾಳಿಗೆ ಇನ್ನೂ ಇಪ್ಪತ್ತೈದು ವರ್ಷಗಳು ದಾಟಿರಲಿಲ್ಲ. ಆತನ ನಂತರ ಆತನ ತಮ್ಮ ರತ್ನಸಿಂಗು ರಾಜನಾದನು. ಆತನಿಗೆ ಅತ್ತಿಗೆಯ ನಡವಳಿಕೆ ಇಷ್ಟವಾಗಲಿಲ್ಲ. ಈಕೆಯನ್ನು ನಾಶನಮಾಡುವವರೆಗು ವಂಶದ ಮಚ್ಚೆ ಹೋಗುವುದಿಲ್ಲವೆಂದು ಆತನ ವಿಶ್ವಾಸ. ಅವನು ಆಕೆಯನ್ನು ಸಾಯಿಸುವುದಕ್ಕೆ ಎಷ್ಟೋ ರೀತಿಗಳಲ್ಲಿ ಪ್ರಯತ್ನಿಸಿದನು. ತನ್ನ ಅಣ್ಣ ಮರಣಿಸಿದಾಗ ಆಕೆಯನ್ನು ಸಹಗಮನ ಮಾಡೆಂದು ಅವನು ನಿರ್ಭಂಧಿಸಿದನು. ಅದಕ್ಕೆ ಆಕೆ ಅಂಗೀಕರಿಸಲಿಲ್ಲ. ತನ್ನ ತನುವು ಮನಸ್ಸು ಕೃಷ್ಣಾರ್ಪಿತಗಳೆಂದು ಅವುಗಳ ಮೇಲೆ ತನಗೆ ಹಕ್ಕಿಲ್ಲವೆಂದು ಆಕೆ ನಿರ್ಭಯವಾಗಿ ತಿಳಿಸಿದಳು. ಇದರಿಂದ ಅವನು ಹಾಕಿದ ಉಪಾಯ ಸಾಗಲಿಲ್ಲ. ಅವನು ಆಕೆಗೊಂದು ದಿನ ಒಂದು ಬುಟ್ಟಿಯನ್ನು ಕಳುಹಿಸಿದನು. ಅದರಲ್ಲಿ ಕೃಷ್ಣಸೇವೆಗಾಗಿ "ಹೂಮಾಲೆ" ಗಳಿವೆಯೆಂದು ಹೇಳಿ ಕಳುಹಿಸಿದನು. ಮೀರಾ ಮೊದಲೆ ಅನುಮಾನ ಪಟ್ಟಳು ಆಕೆಗೇನು ಭಯವಿದೆ? ಕೃಷ್ಣ ನಾಮಸ್ಮರಣೆಯಿಂದ ಆ ಬುಟ್ಟಿಯನ್ನು ತೆರೆದಳು. ಅದರಲ್ಲಿದ್ದ ಹೆಬ್ಬಾವು ನಿಜವಾಗಿ ಹೂವಿನ ಮಾಲೆಯಂತೆ ಬದಲಾಗಿದೆ. ಮೀರಾ ಆ ಮಾಲೆಯನ್ನು ಕೃಷ್ಣ ಪಾದಗಳಿಗೆ ಸಮರ್ಪಿಸಿದಳು. ಮೈದನ ಅಷ್ಟಕ್ಕೆ ತನ್ನ ಪ್ರಯತ್ನಗಳನ್ನು ಬಿಡಲಿಲ್ಲ. ಆತನು ಒಂದು ದಿನ ವಾಸುದೇವ ಸಾಲಗ್ರಾಮವೆಂದು ಮತ್ತೊಂದು ಸರ್ಪವನ್ನು ಕಳುಹಿಸಿದನು. ನಿರಂತರ ಕೃಷ್ಣ ಪಾದಾರ್ಪಿತ ಚಿತ್ತಳಾದ ಆಕೆ ಆ ಬುಟ್ಟಿಯನ್ನು ತೆರೆದಳು. ಅದರಲ್ಲಿ ನಿಜಕ್ಕು ಸಾಲಗ್ರಾಮವೆ ಇದೆ. ಇನ್ನು ಮೈದುನ ರಹಸ್ಯ ಕೆಲಸಕ್ಕೆ ಬಾರದೆಂದುಕೊಂಡನು. ಒಂದು ದಿನ ಕಾರ್ಕೋಟಕ ವಿಷವನ್ನು ಒಂದು ಪಾತ್ರೆಯಲ್ಲಿ ತುಂಬಿಕೊಂಡು ಬಂದನು. ಆ ವಿಷವನ್ನು ಕುಡಿದು ಮರಣಿಸಬೇಕಾಗಿದೆಯೆಂದು ನಿರ್ಬಂಧಿಸಿದನು. ಮೀರಾ ಅವನನ್ನು ಧಿಕ್ಕರಿಸ ಬಹುದು ಆದರೆ ಗಿರಿಧರನು ತನ್ನ ಪಾಲಿಗೆ ಇದ್ದಾನೆಂದು ಆಕೆಗೆ ತಿಳಿದಿತ್ತು. ಆಕೆ ವಿಷಪಾತ್ರೆಯನ್ನು ತೆಗೆದುಕೊಂಡು ಗಟಗಟನೆ ಕುಡಿದಳು. ಆ ವಿಷ ಆಕೆಗೆ

ಅಮೃತವಾಯಿತು. ಮತ್ತೊಂದು ದಿನ ರತ್ನ ಸಿಂಗು ಕಂಟಕಶಯ್ಯವನ್ನು ಕಳುಹಿಸಿ ಅದರ ಮೇಲೆ ಶಯನಿಸಬೇಕೆಂದು ಆತನ ನಿರ್ಭಂಧದ ಮೇರೆಗೆ ಆಕೆ ಹಾಗೆ ಶಯನಿಸಿದಳು. ಆ ಕಂಟಕಗಳು ಕ್ಷಣದಲ್ಲಿ ಹೂವುಗಳಾದವು. ಇಂತಹ ವಿಚಿತ್ರಗಳು ಪ್ರತಿ ಭಕ್ತನ ಜೀವನದಲ್ಲಿಯೂ ಸಹ ಇರುವವು. ಅವರು ಈ ಸಿದ್ಧ ಶಕ್ತಿಗಳನ್ನು ಕೋರುವುದಿಲ್ಲ. ಅವುಭಕ್ತಿಗೆ ಬಾಧಕಗಳೆಂದು ಅವರ ಆಲೋಚನೆ. ಆದರೆ ಪರಮಾತ್ಮನು ಅವರ ಯೋಗಕ್ಷೇಮವನ್ನು ಕಣ್ಣಿಗೆ ರೆಪ್ಪೆಯಂತೆ ರಕ್ಷಿಸುವನು.

ಮೈದುನ ಇಡುವ ನೋವುಗಳು ಆಕೆಗೆ ದಿನದಿನಕ್ಕೂ ಸಹಿಸಲಾರ ದಂತಿದ್ದವು. ಆದರೆ ಆಕೆಗೊಂದು ಸಮಸ್ಯೆ ಕಾಡಿಸುತ್ತಿತ್ತು. ಸ್ತ್ರೀಗೆ ಚಿಕ್ಕಂದಿನಲ್ಲಿ ಹುಟ್ಟಿದ ಮನೆಯಲ್ಲಿರಬೇಕು. ವಿವಾಹವಾದ ನಂತರ ಗಂಡನ ಮನೆಯಲ್ಲಿರಬೇಕು, ಮುದುಕರಾದಾಗ ಸಂತಾನವನ್ನು ಆಶ್ರಯಿಸಿ ಜೀವಿಸಬೇಕು. ತನಗೆ ಗಂಡನಿಲ್ಲ, ಸಂತಾನವಿಲ್ಲ. ಆದರೆ ಗಂಡನ ಗೃಹವನ್ನು ಬಿಟ್ಟು ಹೋಗುವುದು ಸರಿಯೋ ಅಲ್ಲವೋ ಎಂಬ ಸಂದೇಹವಿತ್ತು. ಈ ಸೂಕ್ಷ್ಮ ವಿಷಯವನ್ನು ವಿವರಿಸಿಕೊಳ್ಳಬೇ ಕೆಂದು ಆಕೆ ತುಳಸೀದಾಸನಿಗೆ ವಿನಯದಿಂದ ಒಂದು ಪತ್ರ ಬರೆದಳು. ಅವರು ಆಗ ಕಾಶೀನಗರದಲ್ಲಿದ್ದರು. ತುಲಸೀದಾಸ ಮಹಾಭಕ್ತನು ರಾಮಾಯಣವನ್ನು ರಚಿಸಿದ ಭಕ್ತ ಕೋಟೀರ. ಮಹಾಕವಿಯಾಗಿ ಮಹಾಭಕ್ತನಾಗಿ ಆತನಿಗೆ ಸರಿಸಮಾನರು ಹಿಂದಿ ಸಾಹಿತ್ಯದಲ್ಲಿ ಇಲ್ಲೆನ್ನಬಹುದು. ಮೀರಾ ತುಳಸಿಗೆ ಬರೆದು ಕಳುಹಿಸಿದ ಪತ್ರ ಈ ಕೆಳಗಿನ ವಿಧಾನದಲ್ಲಿದೆ.

'ಸ್ವಾಮಿ! ನೀವು ಸುಖನಿಧಾನರು. ಭಕ್ತರ ದುಃಖವನ್ನು ಪರಿಹರಿಸುವ ಕರುಣಾ ಹೃದಯಿಗಳು. ನಿಮಗೆ ಮಾತು ಮಾತಿಗು ನಮಸ್ಕರಿಸುತ್ತಿದ್ದೇನೆ. ನನ್ನ ಹೃದಯ ತಾಪವನ್ನು ಪರಿಹರಿಸಿ ಮನೆಯಲ್ಲಿನ ಸ್ವಜನರು ನನ್ನ ಭಕ್ತಿಗೆ ಆತಂಕ ಪಡಿಸುತ್ತಿದ್ದಾರೆ. ಅವರು ಅನೇಕವಾದ ಅಡಚಣೆಗಳನ್ನು ಕಲ್ಪಿಸುತ್ತಿದ್ದಾರೆ ಸಾಧು ಸಂಗತಿ ಮಾಡಲು ಬಿಡುವುದಿಲ್ಲ. ಭಜನೆ ಮಾಡಿಕೊಳ್ಳಲು ಬಿಡುವುದಿಲ್ಲ. ಚಿಕ್ಕಂದಿನಿಂದ ನನಗೆ ಗಿರಿಧರನ ಜೊತೆ ಮೈತ್ರಿ ಪ್ರಾಪ್ತಿಸಿದೆ. ಎಷ್ಟು ಪ್ರಯತ್ನಿಸಿದರು ಆ ಸ್ನೇಹ ಬಿಡುವಂತಿಲ್ಲ. ನನ್ನನ್ನು ಈಗೇನು ಮಾಡಬೇಕೆನ್ನುತ್ತೀರ? ನನ್ನ

ಪಾಲಿಗೆ ತಾಯಿ ತಂದೆಯರು ನೀವೇ ನನಗೆ ಒಳ್ಳೆಯ ಮಾರ್ಗವನ್ನು ಉಪದೇಶಿಸಬೇಕೆಂದಳು.

**ತುಳಸೀದಾಸ ಆ ವಿಷಯಕ್ಕೆ ಹೀಗೆ ಸದುತ್ತರ ಕಳುಹಿಸಿದನು.**

"ಮಗಳೇ! ಭಗವಂತನು ಯಾರಿಗೆ ಪ್ರಿಯನಲ್ಲವೊ ಅವರು ನಮಗೆ ಪರಮ ಸ್ನೇಹಿತರಾದರೂ ಅವರನ್ನು ಬಿಡಬೇಕು. ಅಂತವರು ಕೋಟಿ ಶತ್ರುಗಳೊಂದಿಗೆ ಸಮಾನ. ಭಕ್ತನಾದ ಪ್ರಹ್ಲಾದನು ಶ್ರೀ ಹರಿಗಾಗಿ ತಂದೆಯನ್ನು ಬಿಟ್ಟನು. ವಿಭೀಷಣನು ಅಣ್ಣನನ್ನು ಬಿಟ್ಟನು. ಭರತನು ತಾಯಿಯನ್ನು ದ್ವೇಷಿಸಿದನು. ಬಲಿ ಶುಕ್ರಾಚಾರ್ಯನನ್ನು ಬಿಟ್ಟನು. ಗೋಪಕಾಂತೆಯರು ಗಂಡಂದಿರನ್ನೆ ಬಿಟ್ಟರು. ಇವರೆಲ್ಲರು ದೇವರ ಭಕ್ತರೆ. ತಾಯಿ! ಯಾರಿಗೆ ಭಗವಂತನ ಮೇಲೆ ಅನನ್ಯ ಪ್ರೀತಿ ಇರುತ್ತದೊ ಅವರೊಂದಿಗೆ ಸಂಬಂಧವೆ ಧನ್ಯ. ಉಳಿದ ಸುಖಗಳು (ಕಣ್ಣು ಚೆರಚು) ಕಾಡಿಗೆಯಂತವು. ಲೌಕಿಕ ಬಂಧಗಳು ವಿನಾಶ ಹೇತುವುಗಳು. ಭಗವಂತನೇ ಪರಮ ಹಿತನು, ಭಕ್ತರಿಗೆ ಪ್ರಾಣಾಧಿಕನು. ಯಾವ ಮಾರ್ಗದಲ್ಲಿ ಕೃಷ್ಣನು ಸಿಗುವನೊ ಅದೇ ಉತ್ತಮ ಧರ್ಮ".

ಈ ಮಾತಿನಿಂದ ಮೀರಾಳ ಸಂದೇಹ ಪರಿಹಾರವಾಯಿತು. ಆಕೆ ತಕ್ಷಣವೆ ಮನೆ ಬಿಟ್ಟಳು. ಮೀರಾ ಬೃಂದಾವನವನ್ನು ಸೇರಿದಳು. ಅಲ್ಲಿ ಒಂದು ಕೃಷ್ಣದೇವಾಲಯವಿದೆ. ಈ ಸ್ವಾಮಿಗೆ 'ರಣಬಾಂಕುರಾ' ಎಂದು ಹೆಸರು. ಅಲ್ಲಿ ಆಕೆ ಭಜನೆ ಕೀರ್ತನೆಗಳನ್ನು ಮಾಡುತ್ತಿದ್ದಳು. ಸ್ವಲ್ಪ ಕಾಲದ ನಂತರ ಮೀರಾ ತೀರ್ಥಯಾತ್ರೆಗೆ ಹೊರಟಳು. ದಾರಿಯಲ್ಲಿ ತುಳಸೀದಾಸನ ಚರಣಕಮಲಗಳನ್ನು ಆಕೆ ಸೇವಿಸಿದಳು. ಆ ಪರಮ ಭಕ್ತನ ಆಶೀರ್ವಾದ ಪಡೆದಳು. ಕೃಷ್ಣ ಸಂಚರಣ ಪವಿತ್ರ ಕ್ಷೇತ್ರಗಳನ್ನು ಆಕೆ ದರ್ಶಿಸುತ್ತಾ ದ್ವಾರಕ ಸೇರಿದಳು. ಕೃಷ್ಣ ಪರಮಾತ್ಮನು ಕೊನೆಯ ದಿನಗಳಲ್ಲಿ ನಿವಾಸ ಮಾಡಿದ ಪರಮ ಪವಿತ್ರ ಪ್ರಾಂತವದು. ಆಕೆ ಅಲ್ಲಿಯೆ ತನ್ನ ಜೀವನ ಶೇಷವನ್ನು ಕಳೆದು ಕೊನೆಗೆ ಕೃಷ್ಣ ಐಕ್ಯವನ್ನು ಹೊಂದಿದಳು. ಗೋಲೋಕದಿಂದ ಇಳಿದುಬಂದ ರಾಧಾದೇವಿ ಮತ್ತೆ ಗೋಲೋಕಕ್ಕೆ ಹೋದಳು.

ನೋಡಿದಿರಾ! ಮೀರಾಬಾಯಿ ಎಷ್ಟು ಕಷ್ಟಗಳನ್ನು ಸಹಿಸಿ ತನ್ನವರ್‍ಯಾರು ಇಲ್ಲದಿದ್ದರು ಒಂಟಿಯಾಗಿ ಧೈರ್ಯದಿಂದ ಹೇಗೆ ಮುಂದಕ್ಕೆ ಸಾಗಿಹೋಗಿದ್ದಾಳೋ, ಆದ್ದರಿಂದ ನೀವು ಇಂದಿನಿಂದ ದೈವ ಭಕ್ತಿಯನ್ನೆ ಹೆಚ್ಚಾಗಿಟ್ಟುಕೊಂಡು ಶರೀರ ಬಂಧುಗಳಿಗಿಂತ ಆತ್ಮ ಬಂಧುಗಳಿಗೇ ಹೆಚ್ಚಿನ ಬೆಲೆ ಕೊಟ್ಟು ಜ್ಞಾನವಂತರಾಗಿ ಯೋಗಿಗಳಾಗಿ ಮೋಕ್ಷ ಹೊಂದುವಿರೆಂದು ಆಶಿಸುತ್ತೇನೆಂದು ಆ ಗುರು ತನ್ನ ಏಳು ಜನ ಶಿಷ್ಯರಿಗೆ ಹಿತವನ್ನು ಹೇಳಿದನು. ಇಂದಿನ ಭಕ್ತರು ಶಿಷ್ಯರು ಪೂರ್ವದ ಸಾಂಪ್ರದಾಯಗಳನ್ನು ಬಿಟ್ಟು, ಜ್ಞಾನ ಗುರು ಗುರು ಸಾಂಪ್ರದಾಯಗಳನ್ನು ಮಣ್ಣಿನಲ್ಲಿ ಬೆರೆಸಿ, ತಾವು ಮಾಡುವ ಕೆಲಸಗಳು ಸಕ್ರಮವಾದವುಗಳೆಂದೆ ತಿಳಿಯುತ್ತಿದ್ದಾರೆ. ಮಾತನಾಡದ ಗೊಂಬೆಗಳ ಮುಂದೆ ಸುವಾಸನೆಯ ಬತ್ತಿಗಳನ್ನು ಹಚ್ಚುವುದೆ ಭಕ್ತಿ ಎಂದುಕೊಂಡಿದ್ದಾರೆ. ಒಳ್ಳೆಯದು ಕೆಟ್ಟದ್ದನ್ನು ಗುರುತಿಸಿ ಎಚ್ಚರಿಸುವ ಗುರುಗಳಿಗೆ ಪೂರ್ತಿ ದೂರವಾಗಿದ್ದಾರೆ. ಪೂರ್ವದಲ್ಲಿ ರಾಜರು ಸಹ ಗುರುಗಳಾದ ಕುಲಗುರುಗಳನ್ನು ಅವರಿಗೆ ತಮ್ಮತಮ್ಮ ಆಸ್ಥಾನಗಳಲ್ಲಿ ಅಗ್ರಸ್ಥಾನಗಳನ್ನು ಕೊಟ್ಟು ಅವರ ಸಲಹೆ ಮೇರೆಗೆ ಪರಿಪಾಲನೆಯನ್ನು ಸಾಗಿಸುತ್ತಿದ್ದರು. ಆ ಸಾಂಪ್ರದಾಯವಿದ್ದ ಈ ದೇಶದಲ್ಲಿ ಈ ದಿನ ಮನೆಗೆ ಬಂದ ಗುರುಗಳನ್ನು ಅತಿಥಿಗಳ ಹಾಗೆ ಇಲ್ಲವೆ ಬಿಕ್ಷುಕರ ಹಾಗೆ ನೋಡುವ ಕಾಲ ಬಂದಿದೆ. ಜನ್ಮರಹಸ್ಯಗಳು ಬೋಧಿಸಿ ನೀನು ಇಂತವನೆ ಎಂದು ತಿಳಿಸುವ ಗುರುಗಳಿಗಿಂತ, ಮಾಯೆಯಲ್ಲಿ ಮುಳುಗಿ ಹೋಗುವಂತೆ ಮಾಡುವ ಶರೀರ ಬಂಧುಗಳೇ ಅಧಿಕರೆನ್ನುವ ಕಾಲ ಬಂದಿದೆ. ಎಂದಿಗಾದರು ಆತ್ಮ ಔನತ್ಯವನ್ನು ಕೋರುವ ಆತ್ಮ ಬಂಧುವಾದ ಗುರುವಿಗಿಂತ ಆತ್ಮ ಪತನವನ್ನು ಕೋರುವ ಶರೀರ ಬಂಧುಗಳು ಅಧಿಕರು ಅಲ್ಲವೆಂದು ತಿಳಿದುಕೊಳ್ಳಿ..

**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲ ಎಂದರು ಅದು ಅಸತ್ಯವಲ್ಲ.**

# ಇಂದೂ- ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ = ಬೇವಕೂಫ್ = ನೃಸಿಂಹ ಭಾರತಿ (ಹೈಂದವ ಶಂಖಾರಾವಮು)**

- ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

- ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು "ಇಂದೂ ಸರೋವರವೆಂದು" ಕರೆಯುತ್ತಿದ್ದರು.

- ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ 'ಜ್ಞಾನಿ' ಎಂದು ಅರ್ಥ.

- ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು 'ಇಂದೂ' ಎನ್ನುತ್ತಾರೆ.

- ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ 'ಇಂದೂ ಮಹಾ ಸಮುದ್ರ'ವಾಗಿ ಕರೆಯುತ್ತಿದ್ದರು. ("ತ್ರೈತಾಕಾರ ರಹಸ್ಯ" ಎಂಬ ಗ್ರಂಥದಲ್ಲಿ ಇದೆ.)

- ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

**visit website : www.thraithashakam.org**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.
2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.
3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.
4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.
5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.
6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

# ಕಥೆಗಳ ಜ್ಞಾನ




Author :
The Only GURU of Three Religions
The Spiritual Emperor, Thraitha Theorem Originator
Sri Acharya Prabodhananda Yogeeshwarulu

www.thraithashakam.org